ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ ತರಿಸಿಕೊಂಡಲ್ಲಿ ೫ ಆಣೆ ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
★
AUG. 12
1946

ಸಂಪಾದಕರು : ಹ. ರಾ. ಪುರೋಹಿತ, ಎಂ. ಎ. ]
ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ
[ Editor : H. R. Purohit, M. A.

ಸಂಪುಟ ೧೮ ] ● ಹುಬ್ಬಳ್ಳಿ ಸೋಮವಾರ ತಾರೀಖು ೧೨ — ೮ — ೧೯೪೬ ● [ ಸಂಚಿಕೆ ೧೯

# ಗೋಮಾಂತಕ ಚಳವಳಿಯ ಒಳಹೊರಗು

## ಹೊರಗಿಂದ ಸಂಘಟಿಸಬೇಕೆನ್ನುವವರ ತಪ್ಪು: ಪೋರ್ತುಗೀಸ ಸರಕಾರದ ಮೂಢ ಉದ್ಧಟತನ

### ಆರ್ಥಿಕ ದುರ್ದಶೆ

ಗೋಮಾಂತಕರ ರಾಜಕೀಯ ಸ್ಥಿತಿಗತಿಗಳನ್ನು ಕಳೆದ ವಾರ ದಿಗ್ದರ್ಶನ ಮಾಡಿದ್ದಾಗಿದೆ. ನಾಗರಿಕ ಸ್ವಾತಂತ್ರ್ಯದ ಅಭಾವವಿದ್ದರೂ ಆರ್ಥಿಕ ಸಮೃದ್ಧಿ, ಸುಭಿಕ್ಷೆಗಳಾದರೂ ಅಲ್ಲಿ ನೆಲಸಿವೆಯೆ ? ಹೀಗಿದ್ದರೆ « ಉದಾರ ಏಕತಂತ್ರ » ದ ಅಥವಾ ಇಂಗ್ಲೀಷಿನಲ್ಲಿ ಹೇಳುವಂತೆ benevolent autocracy ಯ ಸತ್ತೆಯಿದೆಂದು ಹೇಳಿ ಸ್ವಲ್ಪಮಟ್ಟಿಗಾದರೂ ಕ್ಷಮಿಸಬಹುದಾಗಿತ್ತು. ಆದರೆ ಗೋವಾ ರಾಜ್ಯದ ಆರ್ಥಿಕ ಹೀನದಶೆಯ ಹೆಗ್ಗುರುತಾಗಿ ಒಂದು ಲಕ್ಷ ಗೋವಾ ಪ್ರಜೆಗಳು ಹಿಂದುಸ್ತಾನ, ಪೋರ್ತುಗೀಜ ಆಫ್ರಿಕಾ ಮೊದಲಾದ ಪರದೇಶಗಳಲ್ಲಿ ದುಡಿದು ಜೀವಿಕೆಯನ್ನು ಗಳಿಸಬೇಕಾಗಿದೆ. ಒಂದು ರೀತಿಯಲ್ಲಿ ನೋಡಿದರೆ ಈ ದೇಶಭ್ರಷ್ಟ ಪ್ರಜೆಗಳೇ ಗೋಮಾಂತಕ ಹಣಕಾಸಿನ ಬೆನ್ನೆಲುಬೆನ್ನಬೇಕು. ಏಕೆಂದರೆ ಅವರು ಹಣಗಳಿಸಿ ಸ್ವದೇಶಕ್ಕೆ ಕಳಿಸಿರದಿದ್ದರೆ ಗೋಮಾಂತಕ ಆಡಳಿತೆಗೆ ಆಯಾತ ನಿರ್ಯಾತ ವ್ಯಾಪಾರಗಳ ವ್ಯತ್ಯಾಸವನ್ನು ಬಾಯಿಗೂಡಿಸಲು ಸಾಧ್ಯವೇ ಆಗುತ್ತಿರಲಿಲ್ಲ. ಗೋಮಾಂತಕ ಜನಸಂಖ್ಯೆ ಬರಿ ೫ ಲಕ್ಷವಿದ್ದು ೧ ಲಕ್ಷ ಜನರು ಹೊರಗೆ ಹೋಗುವ ಅವಶ್ಯಕತೆ ಬಂದಿದ್ದರೆ ಪರಿಸ್ಥಿತಿ ಎಷ್ಟು ಕಠಿನವಾಗಿದೆಯೆಂದು ಊಹಿಸುವದು ಕಠಿಣವಾಗಲಾರದು.

ಕಾರವಾರ ಜಿಲ್ಲೆಯಂತೆ ಅರಣ್ಯಮಯವಾಗಿರುವ ಗೋಮಾಂತಕದಲ್ಲಿ ವ್ಯವಸಾಯಕ್ಕೆ ಸಿಗುವ ಭೂಮಿ ಸಮುದ್ರ ಕರಾವಳಿಯಲ್ಲಿಯ ಅಗಲ ಕಿರಿದಾದ ಪ್ರದೇಶದಲ್ಲಿ ಮಾತ್ರ. ಅಲ್ಲಿ ಅಲ್ಪಸ್ವಲ್ಪ ಭತ್ತ ಬೆಳೆಯುತ್ತದೆ. ಇದಲ್ಲದೆ ತೆಂಗು, ಮಾವು, ಅಡಿಕೆ ಮತ್ತು ಗೋಡಂಬಿ ಬೆಳೆಯುತ್ತವೆ. ಸಮುದ್ರಕರಾವಳಿಯಲ್ಲಿ ಉಪ್ಪಿನ ಮತ್ತು ಮೀನಿನ ಉದ್ಯೋಗಗಳಿವೆ. ಇವುಗಳನ್ನು ಬಿಟ್ಟರೆ ಗೋಮಾಂತಕದಲ್ಲಿ ಸೆರೆಯ ಉದ್ಯೋಗವೊಂದೇ ಕಾಣಸಿಗುತ್ತದೆ. ಈ ಉದ್ಯೋಗಕ್ಕೆ ಯಾವ ನಿರ್ಬಂಧವೂ ಇಲ್ಲ. ಗೋವೆಯಲ್ಲಿರುವ ೭೭॥ ಸಾವಿರ ತೆಂಗಿನ ಮರಗಳಲ್ಲಿ ೭೩ ಸಾವಿರದಿಂದ ಹೆಂಡ ತೆಗೆಯುತ್ತಾರೆ. ಅಲ್ಲಿ ೨॥ ಸಾವಿರ ಸೆರೆಯ ಭಟ್ಟಿಗಳಿವೆ. ೧೩೦೦ ದೇಶಿ ಮತ್ತು ೨೫೦ ವಿದೇಶಿ ಮದ್ಯದ ಅಂಗಡಿಗಳಿವೆ.

ಇದೂ ಒಂದು ದೇವದತ್ತ ವರವೇ ಎನ್ನಬೇಕು. ಏಕೆಂದರೆ ಇದೊಂದೇ ಗೋಮಾಂತಕರ ಜೀವನಾಧಾರ. ಅಲ್ಲಿ ಭೂಮಿಯಿರುವದೇ ಕಡಿಮೆ. ಅದರಲ್ಲಿಯೂ ಬಹುಭಾಗ ಜಾಗೀರದಾರ, ಜಮೀನದಾರ ವರ್ಗಕ್ಕೆ ಸೇರಿದ್ದು. ಉಳಿದವರು ಕಡುಬಡತನದಲ್ಲಿ ನರಳುತ್ತಾರೆ. ಹೆಂಗಸರು ಕೂಡ ಹಮಾಲಿ ಕೆಲಸಕ್ಕೆ ಬರುವಂಥ ಸ್ಥಿತಿ ಅವರದು. ಆ ದೇಶಕ್ಕೆ ಅಕ್ಕಿ, ಗೋದಿ, ಜೋಳ ಮೊದಲಾದ ಆಹಾರ ಪದಾರ್ಥಗಳಿಗಾಗಿ ಆಯಾತವನ್ನೆ ಅವಲಂಬಿಸಬೇಕಾಗುವದು. ಹೀಗೆ ಹೊರಗಿನಿಂದ ಬಂದ ಆಹಾರ ಪದಾರ್ಥಗಳ ಹಂಚುವಳಿ ಅತ್ಯಂತ ಅಸಮರ್ಪಕವಾಗಿದೆ. ಎರಡು ಮೂರು ತಿಂಗಳುಗಳಿಗೊಮ್ಮೆ ಸೀದಾ ಹಂಚಿದರೂ ಹಂಚಿದರೆ. ಹೀಗೆ ಜನ ಬಡತನವಲ್ಲದೆ ಉಪವಾಸವನ್ನೂ ಎದುರಿಸಬೇಕಾಗುವದು. ಈ ವಿಪನ್ನ ಪರಿಸ್ಥಿತಿಯಲ್ಲಿ ಅವರಿಗೆ ಸುರೆಯೇ ಶರಣು. ಹೊಟ್ಟೆ ತುಂಬ ಸೆರೆಯನ್ನು ತುಂಬಿಕೊಂಡು ಅವರು ಸರ್ವದುಃಖಗಳನ್ನೂ ಮರೆತುಬಿಡಲು ಪ್ರಯತ್ನಿಸುತ್ತಾರೆ. ಅದೊಂದು ವಸ್ತು ಅಲ್ಲಿ ಅಗ್ಗವಾಗಿ ಅನಿರ್ಬಂಧವಾಗಿ ದೊರೆಯುತ್ತದೆ.

[ ಕಳೆದ ಸಂಚಿಕೆಯಿಂದ ಮುಂದೆ ]

ಗೋವೆಯಲ್ಲಿ ವ್ಯವಸಾಯ ಭೂಮಿ ಕಡಿಮೆಯಾದರೂ ಪ್ರಕೃತಿಸಂಪತ್ತಿ ಸಮೃದ್ಧವಾಗಿದೆ. ಆದರೆ ಅದನ್ನು ಅಭಿವೃದ್ಧಿಗೆ ತರುವ ವಿಚಾರಕ್ಕೆ ಸರಕಾರ ಎಳ್ಳಷ್ಟು ಗಮನ ಕೊಟ್ಟಿಲ್ಲ. ಮೊನ್ನೆ ಮೊನ್ನೆ ಗೋವಾ ಗವರ್ನರ ಜನರಲ್ಲರಾದ ಬೋಸಾ ಅವರು ಬ್ರಿಟಿಶ ಹಿಂದುಸ್ತಾನದಲ್ಲಿ ಎಲ್ಲಕ್ಕೂ ನಿಯಂತ್ರಣವಿದ್ದು ವ್ಯಾಪಾರ ಸ್ವಾತಂತ್ರ್ಯವಿಲ್ಲ ಎಂದು ದೂಷಿಸಿ ಗೋವೆಯಲ್ಲಿರುವ ವ್ಯಾಪಾರ ಸ್ವಾತಂತ್ರ್ಯವನ್ನು ಅದರೊಡನೆ ಹೋಲಿಸಿದರು. ಬಹುಶಃ ಹದಿನಾರನೆ ಶತಮಾನಕ್ಕಿಂತಲೂ ಹಳೆಯದಾದ ಈ ಪೋರ್ತುಗೀಸ ಕಲ್ಪನೆಯ ವ್ಯಾಪಾರ ಸ್ವಾತಂತ್ರ್ಯದ ತತ್ವವೇ ದೇಶದ ಆರ್ಥಿಕ ಬೆಳವಣಿಗೆಯಲ್ಲಿ ಸರಕಾರ ಸ್ವಲ್ಪವೂ ಆಸ್ಥೆ ವಹಿಸದಂತೆ ಮಾಡಿರಬೇಕು. ಪರಿಣಾಮತಃ ಒಂದೂವರೆ ಕೋಟಿ ರೂಪಾಯಿಯ ಸರಕನ್ನು ಗೋಮಾಂತಕಕ್ಕೆ ಪ್ರತಿವರ್ಷ ಆಯಾತ ಮಾಡಬೇಕಾಗುತ್ತದಾದರೂ ನಿರ್ಯಾತ ಮಾತ್ರ ೫೦ ಲಕ್ಷ ರೂಪಾಯಿಗಿಂತ ಹೆಚ್ಚಿಗಿರುವದಿಲ್ಲ. ಈ ಬಿರುಕನ್ನು ತುಂಬಲು ಸರಕಾರವೇನೂ ಮಾಡಿಲ್ಲ. ಮೊದಲೇ ಹೇಳಿದಂತೆ ದೇಶಭ್ರಷ್ಟ ಗೋಮಾಂತಕರ ಗಳಿಕೆಯಿಂದ ಇದು ತುಂಬುತ್ತದೆ. ಇಲ್ಲದೆ ಹೋಗಿದ್ದರೆ ಪೋರ್ತುಗಾಲದಿಂದ ಚಿನ್ನ ತಂದು ಮಾರದೇ ಬೇರೆ ಗತಿಯಿರುತ್ತಿದ್ದಿಲ್ಲ. ಈ ಪರಿ ಹೊರನಾಡ ಗೋಮಾಂತಕರ ಗಳಿಕೆಯು ಹೋಮವಾಗುತ್ತಿದೆ. ಅದು ಗೋಮಾಂತಕದ ಆರ್ಥಿಕ ಪ್ರಗತಿಗೆ ಉಪಯೋಗ ಬೀಳಲಾರದೆಹೋಗಿದೆ.

### ಆಹಾರ ಪರಿಸ್ಥಿತಿ

ಗವರ್ನರ ಬೋಸಾರ ವ್ಯಾಪಾರ ಸ್ವಾತಂತ್ರ್ಯದ ಸೌಂದರ್ಯವನ್ನು ಗೋವೆಯ ಆಹಾರ ಪರಿಸ್ಥಿತಿಯಲ್ಲಿ ಚನ್ನಾಗಿ ನೋಡಬಹುದು ಆಯಾತವಾದ ಧಾನ್ಯದ ಹಂಚುವಳಿಯಲ್ಲಿರುವ ಅಕಲ್ಪನೀಯ ಅಸಾಮರ್ಥ್ಯದ ಫಲವಾಗಿ ಕಳ್ಳಪೇಟೆಯೆಂದು ಹೆಸರಾಗಿದ್ದರೂ ಬಹಿರಂಗವಾಗಿಯೇ ನಡೆಯುವ ಪೇಟೆಯಲ್ಲಿ ಅಕ್ಕಿ ದೊಡ್ಡ ಸೇರಿಗೆ ೨-೨॥ ರೂಪಾಯಿಗೆ, ( ಗೋದಿ, ಕಡಲೆ ಬೇಳೆ, ತೊಗರಿಗಳೂ ಹಾಗೆಯೆ ) ಜೋಳ ಒಂದು ರೂಪಾಯಿಗೆ, ಸಕ್ಕರೆ ಪೌಂಡಿಗೆ ೧॥ ರೂಪಾಯಿಗೆ ಮಾರುತ್ತಿವೆ. ಇನ್ನಿತರ ಪದಾರ್ಥಗಳೂ ಇದಕ್ಕೆ ಸರಿದೊರೆಯಾಗಿ ಏರಿವೆ. ಇದರಿಂದ ಗಡ್ಡೆಗೆಣಸು, ಉಸುಳಿಗಳ ಮೇಲೆ ಬಡವರು ಬದುಕಬೇಕಾಗುತ್ತದೆ. ಕೆಲವೊಮ್ಮೆ ಆತ್ಮಹತ್ಯೆಯ ಸುದ್ದಿಯೂ ಕೇಳಬರುತ್ತದೆ. ಬಟ್ಟೆಯ ಬೆಲೆಯನ್ನಂತೂ ಕೇಳಲೇ ಬೇಡಿರಿ. ಇಂಥ ಬಡತನ, ಅವ್ಯವಸ್ಥೆಗಳ ನಡುವೆ ಹೆಂಡವೊಂದಕ್ಕೆ ಮುಕ್ತದ್ವಾರವಿರುವಾಗ ಜನರ ನೈತಿಕ ಮಟ್ಟ ಎಷ್ಟು ಎತ್ತರವಾಗಿದ್ದೀತು? ಗೋಮಾಂತಕದ ನಲ್ಲೆಯರ ಕಥೆಗಳನ್ನು ನಾವು ಕೇಳುತಿರುತ್ತೇವೆ. ಬಹುಶಃ ಅವುಗಳ ಮೂಲ ಅಲ್ಲಿಯ ಆರ್ಥಿಕ ಸ್ಥಿತಿಯಲ್ಲಿರಲಿಕ್ಕಿಲ್ಲವೆ !

### ಶಿಕ್ಷಣ

ಗೋಮಾಂತಕ ಪ್ರಾಂತ ಪೋರ್ತುಗಾಲದ ಅವಿಚ್ಛೇದ್ಯ ಭಾಗವಾಗಿದೆ ಎಂದು ಗೋಮಾಂತಕ ಸರಕಾರ ಹೇಳುತ್ತದೆ. ಇದು ಅದರ ಶಿಕ್ಷಣ ಧೋರಣದಲ್ಲಿ ಚನ್ನಾಗಿ ವ್ಯಕ್ತವಾಗುತ್ತದೆ. ತಮ್ಮ ೭೫ ಲಕ್ಷ ಉತ್ಪನ್ನದಲ್ಲಿ ಶಿಕ್ಷಣಕ್ಕಾಗಿ ವೆಚ್ಚ ಮಾಡುವ ೫ ಲಕ್ಷ ರೂಪಾಯಿಗಳನ್ನು ಸರಕಾರದವರು ಪೂರ್ತಿಯಾಗಿ ಪೋರ್ತುಗೀಸ ಭಾಷೆಯ ಶಿಕ್ಷಣಕ್ಕೇ ವಿನಿಯೋಗಿಸಿ ದೇಶಭಾಷೆಗಳನ್ನು ಸರ್ವಥಾ ನಿರ್ಲಕ್ಷಿಸಿಬಿಟ್ಟಿದ್ದಾರೆ. ಗೋವಾದಲ್ಲಿ ೯೩ ಶುದ್ಧ ಪೋರ್ತುಗೀಸ ಶಾಲೆಗಳು, ೭ ಮರಾಠಿ ಪೋರ್ತುಗೀಸ ಶಾಲೆಗಳು ಸರಕಾರದ ಪರವಾಗಿ ನಡೆಯುತ್ತವೆ. ಅಲ್ಲಿಯ ಜನರ ಬೋಧಭಾಷೆಯಂತಿರುವ ಮರಾಠಿ ಸಾಲೆ ಒಂದೂ ಇಲ್ಲ. ಗೋಮಾಂತಕರಲ್ಲಿ ಬಹಳ ಜನರು ಜೀವನಕ್ಕಾಗಿ ಹೊರಗೆ ಹೋಗಬೇಕಾಗುತಿದ್ದು ಅವರಿಗೆ ಇಂಗ್ಲೀಷದ ಅವಶ್ಯಕತೆ ಬಹಳವಾಗಿದ್ದರೂ ಅದನ್ನು ಸರಕಾರ ಕಡೆಗಣಿಸಿದೆ. ಜನರು ಸ್ವಪ್ರಯತ್ನದಿಂದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ಇಂಗ್ಲೀಷ, ಮರಾಠಿ ಶಾಲೆಗಳನ್ನು ನಡೆಸುತ್ತಿದ್ದಾರೆ. ೧೫೦ ಮರಾಠಿ, ಪ್ರಾಥಮಿಕ ಶಾಲೆಗಳೂ ೧೫—೨೦ ಇಂಗ್ಲೀಷ ಕಲಿಸುವ ಹಾಯಸ್ಕೂಲ ಮೊದಲಾದ ಸಂಸ್ಥೆಗಳೂ ಜನರಿಂದ ನಡೆಸಲ್ಪಡುತಿವೆ. ಆದರೆ ಹೀಗೆ ಶಾಲೆಗಳನ್ನು ಸ್ಥಾಪಿಸಲು ಕೂಡ ಅಧಿಕಾರಿಗಳು ಸಮ್ಮತಿಸಬೇಕಾದರೆ ಗೋಳು ಹೊಯ್ದುಕೊಳಬೇಕಾಗುತ್ತದೆ.

### ಕ್ರಿಶ್ಚಿಯನ್ ಧರ್ಮದ ಪರಿಣಾಮ

ಪೋರ್ತುಗೀಸ ಆಡಳಿತೆಯ ಫಲವಾಗಿ ಗೋಮಾಂತಕದಲ್ಲಿ ಜಾತೀಯತೆ ಅಳಿದಿದೆ, ಸವರ್ಣರ ದಬ್ಬಾಳಿಕೆ ನಿರ್ನಾಮವಾಗಿದೆಯೆಂದು ಗವರ್ನರ ಬೋಸಾರು ಬೆನ್ನು ಚಪ್ಪರಿಸಿಕೊಂಡಿದ್ದಾರೆ. ಆದರೆ ರಾಜಧರ್ಮ, ಸರಕಾರದ ಧರ್ಮ ರೋಮನ್ ಕ್ಯಾಥೋಲಿಕ ಧರ್ಮವಾದುದರಿಂದ ಎಲ್ಲೆಲ್ಲಿಯೂ ಕಂಡುಬರುವ ಕೆಥೋಲಿಕರ ಹೆಚ್ಚಳ, ಹೊರತು ಮತ್ತಾವ ಮಹತ್ಪರಿಣಾಮವೂ ಅದರಿಂದ ಆಗಿಲ್ಲ. ಸವರ್ಣ ಹಿಂದೂಗಳ ಮಾತಂತಿರಲಿ, ಕ್ಯಾಥೋಲಿಕದಲ್ಲಿಯೇ ಜಾತಿಭೇದ ದಟ್ಟವಾಗಿದೆಯೆಂದರೆ ನೀವು ಆಶ್ಚರ್ಯ ಪಡಬಹುದು. ಆದರೆ ಬ್ರಾಹ್ಮಣರಿಂದ ಮತಾಂತರ ಹೊಂದಿದವರು ಅಲ್ಲಿಯೂ ಮೇಲಿನವರಾಗಿಯೆ ಉಳಿದು ಕೊಂಡಿದ್ದಾರೆ. ಎಲ್ಲ ಬಗೆಯ ಜಾತಿಜಾತಿಗಳೂ ಕ್ರೈಸ್ತರಲ್ಲಿ ಪ್ರಚಲಿತವಾಗಿವೆ. ಬ್ರಾಹ್ಮಣ ಕ್ರೈಸ್ತರಿಗೂ ಕೆಳಜಾತಿಯ ಕ್ರೈಸ್ತರಿಗೂ ಹೊಕ್ಕು ಬಳಕೆ, ಹೆಣ್ಣು ಗಂಡು, ಆಗುವದು ಅಪರೂಪ.

ಸರಕಾರಿ ನೌಕರಿಗಳಲ್ಲಿ ಉಚ್ಚ ನೌಕರಿಗಳೆಲ್ಲ ಪೋರ್ತುಗೀಸರಿಗೆ ಹೋಗಿ ಉಳಿದವುಗಳು ಕ್ಯಾಥೋಲಿಕರಿಗೆ ಮೀಸಲಾಗಿವೆ. ಪಾದ್ರಿಗಳು ಕ್ಯಾಥೋಲಿಕ ಧರ್ಮದ ಪ್ರಚಾರಕ್ಕೆ ವಿಶ್ವಪ್ರಯತ್ನ ಮಾಡುತ್ತಾರೆ. ೬೦೦ ಪಾದ್ರಿಗಳು ಗೋಮಾಂತಕದಲ್ಲಿದ್ದಾರೆ. ವರ್ಷಕ್ಕೆ ೧೦೦ ಪಾದ್ರಿಗಳನ್ನು ಸಿದ್ಧಗೊಳಿಸುವ ಶಾಲೆಗಳು . ನಡೆಯುತ್ತಿವೆ. ಕ್ಯಾಥೋಲಿಕರಲ್ಲಿ ಮೇಲಿನ ವರ್ಗದವರು ತಾವು ಹಿಂದುಸ್ತಾನದವರೆಂಬುದನ್ನೇ ಮರೆತು ಪಂಚೆ ಅಂಗಿ ತೊಡುವವರನ್ನು "ಕೊಂಕಣಿಪೊ" ಎಂದು ಹೀಯಾಳಿಸುತ್ತಾರೆ. ಇದಕ್ಕೆ ಸರಿಯಾಗಿ ಕೆಥೋಲಿಕ ಕಾಯಿದೆಗಳೇ ಹಿಂದೂಗಳಿಗೂ ಮುಸ್ಲಿಮರಿಗೂ ಎಲ್ಲರಿಗೂ ಅನ್ವಯಿಸುತ್ತವೆ. ಹೀಗಾಗಿ ಧಾರ್ಮಿಕ ದಬ್ಬಾಳಿಕೆ ಅಲ್ಲಿ ಸಂಪೂರ್ಣವಾಗಿದೆ.

### ರಾಜಕೀಯ ಚಳವಳಿಯ ಸ್ವರೂಪ

ಈ ಪ್ರಕಾರ ಗೋಮಾಂತಕರ ರಾಜಕೀಯ, ಆರ್ಥಿಕ ಸಾಮಾಜಿಕ ಮತ್ತು ಶೈಕ್ಷಣಿಕ ದುಃಸ್ಥಿತಿ ಚರಮಸೀಮೆಯನ್ನೇ ಮುಟ್ಟಿದೆ. ಜನತೆಯ ಸಹನೆಗೂ ಒಂದು ಮಿತಿಯುಂಟು. ವಿದೇಶದಿಂದ ಬಂದು ಅಧಿಕಾರ ನಡೆಸುವವರ ಧಾರ್ಷ್ಟ್ಯ ಎಷ್ಟೇ ಇರಲಿ, ಅವರ ಶಕ್ತಿಗೂ ಒಂದು ಅವಧಿಯುಂಟೇ ಉಂಟು. ಆ ಮಿತಿ, ಆ ಅವಧಿ ಈಗ ಪ್ರಾಪ್ತವಾದಂತೆ ತೋರುತ್ತದೆ. ಶಿಕ್ಷಣಕ್ಕಾಗಿ, ಜೀವಿಕೆಗಾಗಿ ಸಾವಿರಗಟ್ಟಲೆಯಲ್ಲಿ ತಮ್ಮ ಚಿಕ್ಕ ಕತ್ತಲು ಕೋಣೆಯನ್ನು ಬಿಟ್ಟು ವಿಶಾಲ ವಿಶ್ವದಲ್ಲಿ ಭ್ರಮಿಸುವ ಗೋವಾ ಯುವಕರಿದ್ದಾರೆ. ಅವರು ತಮ್ಮ ಕೋಣೆಯ ಹೊರಗೆ ಬೀಸುತ್ತಿರುವ ಸ್ವಾತಂತ್ರ್ಯದ ಗಾಳಿಯಿಂದ ಹುರುಪೇರಿದವರಾಗಿ ಆ ಹುರುಪನ್ನು ತಮ್ಮ ನಾಡಿಗೆ ತರದೆ ಇರುವದಿಲ್ಲ. ಗೋಮಾಂತಕದಲ್ಲಿ ಸಂಘ ಸಂಸ್ಥೆಗಳ ಮೇಲೆ ತೀವ್ರ ನಿಯಂತ್ರಣವಿರುವದರಿಂದ ಅಲ್ಲಿ ಅವು ತಲೆ ಮರೆಸಿಕೊಂಡೇ ಕೆಲಸಮಾಡಬೇಕಾಗುವದು. ಆದುದರಿಂದ ಎಷ್ಟೋ ಸ್ವಾತಂತ್ರ್ಯಪ್ರಿಯ ಯುವಕರು ಗೋಮಾಂತಕದ ಹೊರಗೆ ಈ ಬಗ್ಗೆ ಸಂಘಟನೆಯ ಪ್ರಯತ್ನವನ್ನು ನಡೆಸಿದರು. ಈಗ ೮ ವರ್ಷದ ದ್ವೀಪಾಂತರವಾಸಕ್ಕೆ ಗುರಿಯಾಗಿ ಆಫ್ರಿಕೆಗೆ ಸಾಗಿಸಲ್ಪಡಲು ಅನುವಾಗಿರುವ ಬ್ರಗಾಂಜಾ ಕುನ್ಹಾ ಅವರು ಮುಂಬಯಿಯಲ್ಲಿ ಗೋವಾ ಕಾಂಗ್ರೆಸ್ ಸಮಿತಿಯನ್ನಾರಂಭಿಸಿದರು. ಆದರೆ ಮುಂದೆ ಆ ಸಂಸ್ಥೆಯು ರೀತಿನೀತಿ ತಮಗೆ ಮೆಚ್ಚಿಕೆಯಾಗದೆ ಹೋದುದರಿಂದಲೋ ಏನೋ ಗೋವನ್ ಯುಥ್ ಲೀಗ್ ಎಂಬ ಬೇರೊಂದು ಸಂಸ್ಥೆಯನ್ನು ಸ್ಥಾಪಿಸಿ ತೀಕ್ಷ್ಣ ರಾಷ್ಟ್ರೀಯ ವೃತ್ತಿಯ ಗೋವಾ ಯುವಕರನ್ನು ಸಂಘಟಿಸತೊಡಗಿದರು. ಇದಲ್ಲದೆ ಡಾ. ಮೆನಝೀಸರ ಗೋಮಾಂತಕ ಪ್ರಜಾಮಂಡಲವೆಂಬ ಇನ್ನೊಂದು ಸಂಸ್ಥೆಯೂ ಮುಂಬಯಿಯಲ್ಲಿದೆ. ಈ ಎಲ್ಲ ಸಂಸ್ಥೆಗಳ ಸಂಚಾಲಕರ ಕಳಕಳಿ, ಸದಿಚ್ಛೆಗಳನ್ನು ಯಾರೂ ಶಂಕಾದೃಷ್ಟಿಯಿಂದ ನೋಡುವಂತಿಲ್ಲ. ಗೋವಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾದ ಡಾ. ತೆಂಡುಲಕರರು ಪ್ರಚಂಡ ದಾಸ್ವಾಧ

(೨ನೇ ಪುಟ ನೋಡಿರಿ)

# ಪುಸ್ತಕ ಮತ್ತು ವಿಮರ್ಶೆ

## ಕಳಸಾಪುರದ ಹುಡುಗರು

ಬರೆದವರು— ಮತಿಘಟ್ಟದ ಕೃಷ್ಣಮೂರ್ತಿ, ಪ್ರಕಾಶಕರು: ಎಸ್.ಎಸ್.ಎನ್. ಬುಕ್ ಡಿಪೋ, ಸಿಟಿ ಮಾರ್ಕೆಟ, ಬೆಂಗಳೂರು, ೧೧೨ ಪುಟ, ರೂ. ೧—೦—೦

"ಸ್ವತಂತ್ರ ಸಾಮಾಜಿಕ ಕಾದಂಬರಿ" ಯೆಂದು ಲೇಖಕರು ಇದನ್ನು ಕರೆದಿದ್ದಾರೆ. ಆದರೆ ಇದು ಒಂದು ಅರ್ಧ—ಐತಿಹಾಸಿಕ ನೀಳ್ಗತೆಯಾಗಿದೆಯೆಂದು ಹೇಳಬಹುದು. ಹಾಸನ ಜಿಲ್ಲೆಯ ಕಳಸಾಪುರದ ಹುಡುಗರು ಹಿಂದೆ ಎಷ್ಟು ಒಗ್ಗಟ್ಟಿನಿಂದಿದ್ದರು, ಎಷ್ಟು ಸಾಹಸಿಗಳಾಗಿದ್ದರು; ಈಗ ಹೊಸ ನಾಗರಿಕತೆಯ ದಾಳಿಯಿಂದ ಕಳಸಾಪುರ ಹೇಗೆ ನಿಷ್ಪ್ರಭವಾಗಿದೆ, ಎಂಬದನ್ನು ಬಣ್ಣಿಸುವದು ಲೇಖಕರ ಗುರಿ. ಹಾಳಾದ ಕಳಸಾಪುರವನ್ನು ಪುನಃ ವೈಭವಶಿಖರಕ್ಕೇರಿಸುವ ಆಶಾವಾಣಿಯೊಂದಿಗೆ ಕಥೆ ಸಮಾಪ್ತವಾಗುತ್ತದೆ. ಇಂಗ್ಲೀಷಿನ "ಟಾಂ ಬ್ರಾವುನ್ಸ್ ಸ್ಕೂಲ ಡೇಸ್" ಕಥೆಯಂತೆ ಹುಡುಗರ ಪ್ರಪಂಚಕ್ಕೇ ಸೇರಿದ ಈ ಕಥೆ ಸ್ವಾರಸ್ಯವಾಗಿದೆ. ಆದರೆ ನಡುನಡುವೆ ಅದರಲ್ಲಿಯೂ ೯೨ ನೆ ಪುಟದ ಮುಂದೆ ಬರುವ ಭೌಗೋಲಿಕ ಐತಿಹಾಸಿಕ ಕಥನಕದಿಂದ ಕಥೆಯ ಅಂದಕ್ಕೆ ಧಕ್ಕೆಯಾಗಿದೆ. ಒಂದು ಒಂದೂವರೆ ಶತಮಾನದ ಕೆಳಗಿನ ನಮ್ಮ ಗ್ರಾಮಜೀವನದ ಚಿತ್ರ ಒಟ್ಟಿನ ಮೇಲೆ ಚೆನ್ನಾಗಿ ಮೂಡಿದೆ.

## ಗೃಹಿಣಿ

ಮೂಲ: ಡಿ. ಹನುಮಂತರಾವ ಅನುವಾದ: ವಿ.ಬಿ. ಈಶ್ವರರಾವ್, ಪ್ರಕಾಶಕರು: ಲಲಿತ ಸಾಹಿತ್ಯಮಾಲೆ, ಧಾರವಾಡ. ೧೦೪ ಪುಟ ರೂ. ೧-೪-೦

ತೆಲುಗು ಕಾದಂಬರಿಯ ಅನುವಾದವಿದು. ಸ್ತ್ರೀ ಹೃದಯದ ಔದಾರ್ಯ,ಪುರುಷನ ಚಾಪಲ್ಯ—ಈ ಪ್ರಾಚೀನ ಸೂತ್ರದ ಸುತ್ತ ಇದರ ಕಥೆ ಹೆಣೆದಿದೆ. ನಟಿಯೊಬ್ಬಳಲ್ಲಿ ಅನುರಕ್ತನಾಗಿ ಸರ್ವಸಕ್ಕೆ ಎರವಾಗಲು ಸಿದ್ಧನಾದ ಲಂಪಟ ಶ್ರೀಮಂತ ಯುವಕ ಅವನನ್ನು ಅವಳ ಕೈಯಿಂದ ಪಾರುಮಾಡಲು ಅವನ ತಾಯಿ ಮತ್ತು ಗೆಳೆಯ ಸೇರಿ ಆಕೆಗೆ ದುಡ್ಡು ಕೊಟ್ಟು ಊರು ಬಿಡಿಸಲು ಪ್ರಯತ್ನಿಸುತ್ತಾರೆ. ಆದರೆ ಆಕೆಯ ಪ್ರೇಮ ಪವಿತ್ರವೂ ಪ್ರಾಮಾಣಿಕವೂ ಆಗಿರುತ್ತದೆ. ಅವಳು ಹಣವೇನನ್ನೂ ತೆಗೆದುಕೊಳ್ಳದೆ ತನ್ನ ವಿಟನ ಕಲ್ಯಾಣೈಕಾಂಕ್ಷೆಯಿಂದ ಅಂತರ್ಧಾನವಾಗಿ ಬಿಡುತ್ತಾಳೆ. ಯುವಕ ಕೆಲಕಾಲದ ನಂತರ ಮದುವೆಯಾಗಿ ಪ್ರಸಿದ್ಧ ಡಾಕ್ಟರನಾಗುತ್ತಾನೆ. ಒಂದು ದಿನ ದೀನ ದರಿದ್ರಳಾಗಿ ಜೀವನ ಯಾತ್ರೆ ಮುಗಿಸಲು ಅನುವಾದ ಅವನ ಹಿಂದಿನ ಪ್ರೇಯಸಿಯ ಮೃತ್ಯುಶಯ್ಯೆಯ ಬಳಿ ಒದಗುವ ಪ್ರಸಂಗ ಅವನಿಗೆ ಬರುತ್ತದೆ ಅವಳು ತನ್ನ ಮಗನನ್ನು ಇವನ ಕೈಲಿಟ್ಟು ಕಣ್ಮುಚ್ಚುವಳು. ಇವನ ತೊಂದರೆಯನ್ನು ಕೊನೆಗಾಣಿಸಬೇಕೆಂದೇನೋ ಆ ಹುಡುಗ ಮೋಟಾರ ಅಪಘಾತಕ್ಕೆ ತುತ್ತಾಗಿ ಬಿಡುವ. ಇವನಿಗೆ ನಿಶ್ಚಿಂತೆಯಾಗುತ್ತದೆ. ಕಥೆಯ ಹೆಣಿತ ಚೆನ್ನಾಗಿದೆ. ಆದರೆ ಮುಕ್ತಾಯವೊಂದನ್ನು ಬಿಟ್ಟರೆ ಇತರ ವಿಷಯಗಳಲ್ಲಿ ಕಥನ ರೀತಿಯೂ ವಸ್ತುವೂ ನಿರ್ವಿಶೇಷವಾಗಿದೆ ಮಾತ್ರವಲ್ಲ, ಹಲ ಕಾದಂಬರಿಕಾರರು ತುಳಿದ ಹಾದಿಯನ್ನೆ ತುಳಿದಿದೆ. ಅನುವಾದಕರು ತೆಲುಗಿನ ಸಾಮಾನ್ಯವನ್ನು ಬಿಟ್ಟು ಉತ್ತಮೋತ್ತಮ ಕಥೆ-ಕಾದಂಬರಿಗಳ ಅನುವಾದಕ್ಕೆ ಕೈಹಚ್ಚಿದರೆ ಒಳಿತೆಂದು ಸೂಚಿಸುವೆವು.

## ಬಡತನದ ಬಾಳು

ಬರೆದವರು: ಆನಂದಕಂದ, ಪ್ರಕಾಶಕರು: ಜಯಂತಿ ಕಾರ್ಯಾಲಯ ಧಾರವಾಡ. ೧೧೪ ಪುಟ, ರೂ ೧-೪-೦

ಶ್ರೀ ಬೆಟಗೇರಿ ಕೃಷ್ಣಶರ್ಮರ ಕಥಾ ಸಂಗ್ರಹವಿದು ಎರಡನೆ ಮುದ್ರಣವನ್ನು ಕಾಣಬೇಕಾಗಿ ಬಂದದ್ದು ಅದರ ಜನಪ್ರಿಯತೆಯ ದ್ಯೋತಕವೇ ಸರಿ. ಈ ದ್ವಿತೀಯ ಮುದ್ರಣದಲ್ಲಿ "ರಾಜನ ಧರ್ಮ ಸಂಶೋಧನೆ" ಯೆಂಬ ಹಿಂದಿನ ಮುದ್ರಣದಲ್ಲಿ ಇಲ್ಲದ ಕಥೆಯನ್ನು ಸೇರಿಸಲಾಗಿದೆ. ಶ್ರೀ ಶರ್ಮರನ್ನು ಪ್ರಮುಖ ಸಾಹಿತಿಯ ಸ್ಥಾನಕ್ಕೇರಿಸಿದ ಕಥೆಗಳಲ್ಲಿ ಕೆಲವು ಇಲ್ಲಿವೆಯೆಂದ ಮೇಲೆ ಅವುಗಳು ಉತ್ತಮ ಕೃತಿಗಳೆಂದು ಹೇಳುವ ಅವಶ್ಯಕತೆಯಿಲ್ಲ.

## ಕಾಶ್ಮೀರದ ಕ್ರಾಂತಿ

ಬರೆದವರು: ಕುಳಕುಂದ ಶಿವರಾಯರು. ಪ್ರಕಾಶಕರು: ಜನತಾ ಸಾಹಿತ್ಯ, ಹುಬ್ಬಳ್ಳಿ. ೧೬ ಪುಟ, ಎರಡಾಣೆ.

ಈಚಿಗೆ ಹಿಂದುಸ್ತಾನದಲ್ಲೆಲ್ಲ ಕಲಮಲವನ್ನೆಬ್ಬಿಸಿದ ಕೆಲ ಘಟನೆಗಳ ರಂಗವಾದ ಕಾಶ್ಮೀರದ ಸ್ಥಿತಿಗತಿಯನ್ನು ಈ ಚಿಕ್ಕ ಹೊತ್ತಗೆ ಬಣ್ಣಿಸುತ್ತದೆ ಕಾಶ್ಮೀರದ ಆಡಳಿತದ ಕೊಳಕುಗಳನ್ನೆಲ್ಲ ಇಲ್ಲಿ ಬಯಲಿಗೆ ತರಲಾಗಿದೆ. ಕಾಶ್ಮೀರ ಕ್ರಾಂತಿಯ ಕಾರಣ, ಹಿನ್ನೆಲೆಗಳನ್ನು ಅರಿತುಕೊಳ್ಳಬೇಕೆಂಬವರಿಗೆ ಉತ್ತಮ ಸಾಧನ.

## ಅಡ್ಡಿಕೆಯ ಕಳವು

ಲೇಖಕರು: ತ. ಸು. ರಾಮಸ್ವಾಮಯ್ಯ ಪ್ರಕಾಶಕರು: ಸಾಹಿತ್ಯಾಲಯ, ಚಿತ್ರದುರ್ಗ ಫೂ. ಅ. ಪ. ೫೫ ಪುಟ ಬೆಲೆ ೦-೬-೦

"ಚಿತ್ರದುರ್ಗದಲ್ಲಿ ಸಾಹಿತಿಗಳು ಅನೇಕರಿದ್ದಾರೆ ಆದರೆ ಅವರನ್ನು ಮತ್ತು ಅವರ ಸಾಹಿತ್ಯವನ್ನು ಬೆಳಕಿಗೆ ತರುವವರಿಲ್ಲ" ಎಂಬ ಅಪವಾದವನ್ನು ಹೋಗಲಾಡಿಸಲು ಹೊರಟ "ಸಾಹಿತ್ಯಾಲಯ"ದ ಮೊದಲನೆ ಪ್ರಕಟನೆಯಿದು. ಇಂಥ ಉದ್ಯಮದ ಮಂಗಲಾಚರಣೆಗೆ "ಸಾಹಿತ್ಯ ದೃಷ್ಟಿಯಲ್ಲಿ" ತಮ್ಮ ಕಥೆಗಳು ಯೋಗ್ಯವಾಗಿವೆಯೋ ಎಂಬ ಸಂಶಯವನ್ನು ಲೇಖಕರೇ ವ್ಯಕ್ತಗೊಳಿಸಿದ್ದಾರೆ. ಇದರಲ್ಲಿರುವ ನಾಲ್ಕು ಕಥೆಗಳು ಸ್ಪಷ್ಟವಾದ ಮಹೋನ್ನತಗುಣದನ್ನು ತೋರಿಸುವದಲ್ಲವಾದರೂ ಒಮ್ಮೆ ಓದಲು ಅಡ್ಡಿಯಿಲ್ಲ. ಲೇಖಕರು ಉದ್ಯಮಶೀಲರಾದರೆ "ಸಾಹಿತ್ಯ ದೃಷ್ಟಿಯಲ್ಲಿ" ಉತ್ತಮ ಕಥೆಗಳನ್ನು ಬರೆಯಬಲ್ಲರೆಂದು ಹೇಳಬಹುದು. ಲೇಖಕರ ಮತ್ತು ಪ್ರಕಾಶಕರ ಧ್ಯೇಯಗಳು ಸಾರ್ಥಕವಾಗಲೆಂದು ಹಾರೈಸುತ್ತೇವೆ.

## Sterility

by Dr K V. Mathew (Health Book Stall,7 Krishnan Koil St , G. T. Madras, pp. 96 Rs. 3/1.

ಸ್ತ್ರೀ ಪುರುಷರಲ್ಲಿರುವ ಸಂತಾನ ಹೀನತೆ ಅಥವಾ ಷಂಢತ್ವದ ಸಮಸ್ಯೆಯನ್ನು ಇಲ್ಲಿ ತಿರ್ವಾಂಕೂರು ಸಂಸ್ಥಾನದ ವೈದ್ಯಕೀಯ ಶಾಖೆಯಲ್ಲಿ ದುಡಿದ ಡಾ. ಮ್ಯಾಥ್ಯೂ ಅವರು ಶಾಸ್ತ್ರೀಯವಾಗಿ ವಿವೇಚಿಸಿದ್ದಾರೆ. ಸಂತಾನಹೀನರಾಗಿ ಬಳಲುವವರು ನಾನಾವಿಧ ಪ್ರಚಲಿತ ಭ್ರಮೆಗಳೊಳಗಾಗಿ ವ್ಯರ್ಥವಾಗಿ ಶ್ರಮಪಡುತ್ತಾರೆ, ಹಣ ಕಳೆದುಕೊಳ್ಳುತ್ತಾರೆ. ಈ ಪುಸ್ತಕ ಅಂಥವರಿಗೆ ಯೋಗ್ಯ ಮಾರ್ಗದರ್ಶನ ಕೊಡಬಲ್ಲದು. ಉಭಯ ಲಿಂಗಗಳಲ್ಲಿ ಷಂಢತ್ವದ ಕಾರಣಗಳು ಮತ್ತು ಅವುಗಳನ್ನು ನಿವಾರಿಸಲು ಈ ವರೆಗೆ ವೈದ್ಯಕೀಯ ಸಂಶೋಧಕರು ಕಂಡುಹಿಡಿದ ಉಪಾಯಗಳು ಇಲ್ಲಿ ತಿಳಿ ಭಾಷೆಯಲ್ಲಿ ವಿವರಿಸಲ್ಪಟ್ಟಿವೆ. ಚಿತ್ರಗಳು, ಅಂಕಸಂಖ್ಯೆಗಳು ಓದುಗರಿಗೆ ವಿಷಯಗಳನ್ನು ತಿಳಿದುಕೊಳ್ಳಲು ಸುಲಭಮಾಡಿವೆ. ಸ್ವತಃ ಲೈಂಗಿಕ ರೋಗಗಳ ಚಿಕಿತ್ಸೆಯಲ್ಲಿ ಹೆಸರಾದ ಡಾ. ಮ್ಯಾಥ್ಯೂ ಅವರು ಲೈಂಗಿಕ ವಿಜ್ಞಾನವನ್ನು ಕುರಿತು ಇನ್ನೂ ಕೆಲ ಪುಸ್ತಕಗಳನ್ನು ಬರೆದವರು. ಅವರ ಪ್ರಯತ್ನದಿಂದ ಈ ಬಗೆಗೆ ಹಬ್ಬಿರುವ ಅಜ್ಞಾನದ ನಿವಾರಣೆಗೆ ಸಹಾಯವಾಗದಿಂದು.

## ಗೋಮಾಂತಕ ಚಳವಳಿಯ ಒಳ ಹೊರಗು

(ಮೊದಲನೆ ಪುಟದಿಂದ)

ಮಾಹಿಯಿಂದು ಎಲ್ಲರಿಗೂ ಗೊತ್ತು. ಆದರೆ ಇವರಿಷ್ಟು ಜನರಿಗೂ ಗೋಮಾಂತಕದ ಜನತೆಯೊಡನೆ, ಅಲ್ಲಿಯ ಕಾರ್ಯಕರ್ತರೊಡನೆ ಪ್ರತ್ಯಕ್ಷ ಸಂಪರ್ಕವಿಲ್ಲ. ಡಾ. ತೆಂಡೂಲಕರರಂತೂ ಗೋಮಾಂತಕದ ಪುತ್ರರು ಕೂಡ ಅಲ್ಲ. ಎಷ್ಟೇ ತೊಡಕುಗಳಿರಲಿ, ಪ್ರತ್ಯಕ್ಷ ಗೋವೆಯಲ್ಲಿದ್ದು, ಬಂದ ಬವಣೆಗಳಿಗೆ ಎದೆಗೊಟ್ಟು ಚಳವಳಿಯನ್ನು ಸಂಘಟಿಸಿದಲ್ಲದೆ ಪೋರ್ತುಗೀಸ ಸರಕಾರದ ಕಣ್ಣು ತೆರೆಯಲು ಸಾಧ್ಯವಿಲ್ಲ.

### ಗೋಮಾಂತಕದಲ್ಲಿ

ಇನ್ನು ಪ್ರತ್ಯಕ್ಷ ಗೋವೆಯಲ್ಲಿದ್ದು ಕೆಲ ರಾಜಕೀಯ ಸಂಸ್ಥೆಗಳು ಕೆಲಸ ಮಾಡುತ್ತಿವೆ. ಕಠೋರ ಕಾಯಿದೆಗಳಿರುವದರಿಂದ ಅವು ಬಹಿರಂಗವಾಗಿ ಕೆಲಸ ಮಾಡುವದು ಸಾಧ್ಯವಿಲ್ಲವಾಗಿ ಒಳಗೊಳಗೆ ಸಂಘಟನೆ ನಡೆಸಿವೆ. ಇವುಗಳಲ್ಲಿ (೧) ಲೀಗ ಆಫ ಇಂಡಿಯಾ, (೨) ಗೋಮಾಂತಕ ಕಾಂಗ್ರೆಸ ಸಮಿತಿ, ಮತ್ತು (೩) ಗೋವಾ ರಾಷ್ಟ್ರೀಯ ಕಾಂಗ್ರೆಸ್ ಸಮಿತಿ ಇವುಗಳನ್ನು ಹೆಸರಿಸಬಹುದು. ಗೋವಾ ವಿಧಾಯಕ ಸಮಿತಿಯೆಂಬ ಸಂಸ್ಥೆ ವಿಧಾಯಕ ಕಾರ್ಯದ ಮೂಲಕ ಜನಜಾಗೃತಿಯ ಧ್ಯೇಯವನ್ನಿಟ್ಟುಕೊಂಡಿದ್ದರೂ ಮೊನ್ನೆ ಮೊನ್ನೆ ಅಸ್ತಿತ್ವಕ್ಕೆ ಬಂದಿರುವ ಇದರ ಬಗೆಗೆ ಏನನ್ನೂ ಹೇಳುವ ಕಾಲ ಬಂದಿಲ್ಲ.

ಹೆಸರಿಸಿದ ಮೂರು ಸಂಸ್ಥೆಗಳಲ್ಲಿ ಮೊದಲನೆರಡು ಹೆಚ್ಚು ಕಡಿಮೆ ಉಚ್ಚ ವರ್ಗದ ವ್ಯಾಪಾರಿ ವಕೀಲ ಮೊದಲಾದವರನ್ನೊಳಗೊಂಡ ಪ್ರಾಗತಿಕರ ಆರಾಮ ಖುರ್ಚಿ ಸಂಸ್ಥೆಗಳು, ಅಂದರೆ ಶಾಸನಬದ್ಧ ಚಟುವಟಿಕೆಯ ಮವಾಳರ ಸಂಸ್ಥೆಗಳೆನ್ನಡ್ಡಿಯಿಲ್ಲ. ಮೊದಲನೆಯದರಲ್ಲಿ ಕ್ರಿಶ್ಚನ್ನರ ಬಾಹುಳ್ಯ, ಎರಡನೆಯದರಲ್ಲಿ ಹಿಂದೂಗಳ ಹೆಚ್ಚಳವಿಷ್ಟೆ. ಇಲ್ಲಿಯ ಗೋವಾ ಕಾಂಗ್ರೆಸ್ ಸಮಿತಿಗೂ ಮುಂಬಯಿಯ ಸನಾಮ ಸಂಸ್ಥೆಗೂ ಯಾವ ಸಂಬಂಧವೂ ಇಲ್ಲ. ಲೀಗ್ ಆಫ್ ಇಂಡಿಯಾದವರು ಮೊನ್ನೆ ಮೊನ್ನೆ ಜಾಹೀರು ಮಾಡಲ್ಪಟ್ಟ ಭಾಷಣ ಸ್ವಾತಂತ್ರ್ಯವನ್ನು ಒರೆಗೆ ಹಚ್ಚಿ ದೊಡ್ಡ ಸಭೆ ಜರಗಿಸಿದ ಸುದ್ದಿ ಬಂದಿದೆ. ಅವರೀಗ ಗೋಮಾಂತಕಕ್ಕೆ ಘಟನಾ ಸಮಿತಿಯನ್ನು ಬೇಡಿದ್ದಾರೆ. ಹೇಗೇ ಇರಲಿ, ಕ್ರಾಂತಿಕಾರ ಚಳವಳಿಯ ಬಲ ಹೆಚ್ಚಿದಂತೆ ಸರಕಾರ ಈ ಪ್ರಾಗತಿಕರಿಗೆ ಕೆಲವು ಸೌಕರ್ಯಗಳನ್ನು ಒದಗಿಸಿ "ಅರ್ಧಂ ತ್ಯಜತಿ ಪಂಡಿತಃ" ಎಂಬ ನ್ಯಾಯವನ್ನು ಅನುಸರಿಸಲು ಪ್ರಯತ್ನಿಸಬಹುದು.

ಗೋವಾ ರಾಷ್ಟ್ರೀಯ ಕಾಂಗ್ರೆಸ್ಸು ಮಾತ್ರ ನಿಜವಾದ ಅಹಿಂಸಾತ್ಮಕ ಕ್ರಾಂತಿಕಾರರ ಸಂಸ್ಥೆ. ಮುಂದಗಾಮಿ ನಾಯಕರಿಂದ ರೋಸಿಹೋದ ಹುರುಪಿನ ಯುವಕ ಯುವತಿಯರು ಈ ಹೊಸ ಸಂಸ್ಥೆಯನ್ನು ಸ್ಥಾಪಿಸಿಕೊಂಡಿದ್ದಾರೆ. ತರುಣ ವರ್ಗದಲ್ಲಿ ಇದಕ್ಕೆ ಒಳ್ಳೆಯ ಬೆಂಬಲವಿದೆ. ಇದಕ್ಕೆ ಉಜ್ವಲ ಭವಿತವ್ಯವಿದೆಯೆಂದು ಹೇಳಬಹುದು. ನಾಗರಿಕ ಹಕ್ಕುಗಳಿಗಾಗಿ ಚಳವಳಿಯನ್ನು ಮೊದಲು ಮಾಡಿದ ಇವರು "ಗೋವೆಯಿಂದ ಚಲೇ ಜಾವ" ಎಂದು ಪೋರ್ತುಗೀಸರಿಗೆ ಹೇಳಲು ಸಿದ್ಧರಾಗಿದ್ದಾರೆ. ಡಾ ಲೋಹಿಯಾ ಅವರು ಇವರಿಗೆ ಮೊದಲ ಮಾರ್ಗದರ್ಶನ ಮಾಡಿದ್ದಾರೆ. ಇವರು ಸರಕಾರಕ್ಕೆ ಅಸಹನೀಯ ತಲೆನೋವಿನ ಕಾರಣರಾಗುವರೆಂಬಲ್ಲಿ ಸಂದೇಹವಿಲ್ಲ.

### ಭವಿತವ್ಯ

ನಿಕಟ ಭವಿಷ್ಯದಲ್ಲಿ ಗೋಮಾಂತಕದ ಚಳವಳಿ ಬೆಳೆಯುವದೆಂದು ಆಸೆ ಹಿಡಿಯಬಹುದು. ಈಗಿರುವ ಸರಕಾರದ ನಡತೆ ಪ್ರಮುಖ ಪಂಗಡಗಳಾದ ಕ್ರಿಶ್ಚನ್ ಮತ್ತು ಹಿಂದೂಗಳಿಬ್ಬರಿಗೂ ಅಪ್ರಿಯವಾಗಿದೆಯೆಂಬುದು ಬೆಳಕಿನಷ್ಟು ನಿಚ್ಚಳವಾಗಿದೆ. ಚಳವಳಿಯಲ್ಲಿ ಮುಂದಾಳ್ತನ ವಹಿಸಿದವರಲ್ಲಿ ಅನೇಕ ಕ್ರಿಶ್ಚನ್ನರೂ ಇರುವದು ಶುಭಲಕ್ಷಣ. ಮೇಲಾಗಿ ಹಿಂದುಸ್ತಾನದಲ್ಲಿ ಸ್ವಾತಂತ್ರ್ಯದ ಮುಂಬೆಳಗು ಕಾಣತೊಡಗಿದೆ. ಇಂದೋ ನಾಳೆಯೋ ಬ್ರಿಟಿಶರು ಇಲ್ಲಿಂದ ಹೊರಟು ಹೋಗಲೇಬೇಕಾಗುವದು. ಆಗ ಈ ಸ್ವತಂತ್ರ ಜನಸಾಗರದಲ್ಲಿ ಪರಾಧೀನ ದ್ವೀಪವೊಂದು ಉಳಿಯುವದು ಸಾಧ್ಯವೇ ಇಲ್ಲ. ಗಾಂಧೀಜಿಯವರೂ ಇದನ್ನೇ ಹೇಳಿದ್ದಾರೆ. ಹಿಂದುಸ್ತಾನಕ್ಕೆ ಸ್ವಾತಂತ್ರ್ಯ ಸಿಗುವ ವರೆಗೆ ನಮ್ಮಿಂದ ಏನೂ ಅಪೇಕ್ಷಿಸಬೇಡಿರಿ. ಆ ಮೇಲೆ ಗೋಮಾಂತಕವನ್ನು ಹಿಂದುಸ್ತಾನದಲ್ಲಿ ಸಮಾವೇಶವಾಗದಂತೆ ತಡೆಯುವ ಶಕ್ತಿ ಯಾರಲ್ಲಿಯೂ ಇರಲಾರದು, ಎಂದು ರಾಷ್ಟ್ರನಾಯಕರು ಸಾರಿದ್ದಾರೆ.

ಫ್ರೆಂಚರಿಗೆ ಪೋರ್ತುಗೀಸರಂತೆ ಹಿಂದುಸ್ತಾನದಲ್ಲಿ ಕೆಲ "ವಸಾಹತು"ಗಳಿವೆ. ಆದರೆ ಅವರು ಗಾಳಿ ಎತ್ತ ಬೀಸುತಿದೆಯೆಂದು ಕಂಡುಕೊಂಡು ಫ್ರೆಂಚ ಹಿಂದುಸ್ತಾನ ಹಿಂದೀ ಯೂನಿಯನ್ನು [illegible] ಸೇರಲು ತಮ್ಮ ಆಕ್ಷೇಪವಿಲ್ಲೆಂದು [illegible] ಔದಾರ್ಯ ತೋರಿಸಿ ಕಳೆದು ಹೋದುದಕ್ಕೆ ಕೃಷ್ಣಾರ್ಪಣ ಎಂದಿದ್ದಾರೆ ಆದರೆ ಪಾಶ್ಚಾತ್ಯ ರಾಷ್ಟ್ರಗಳಲ್ಲೆಲ್ಲ ಪೋರ್ತುಗೀಸರನ್ನು ಮೀರಿಸುವ ದಡ್ಡರು ಸಿಗುವದು ಸಾಧ್ಯವಿಲ್ಲ. ಗೋಮಾಂತಕದ ಆಡಳಿತೆಯ ಮೌಢ್ಯವನ್ನು ಮೌಢ್ಯಕ್ಕೆ ಹೆಸರಾದ ದೇಶೀಸಂಸ್ಥಾನ ಸರಕಾರಗಳು ಕೂಡ ಮೀರಿಸಲಾರವು- ಗೋವೆಯಲ್ಲಿ ಹಿಂದೆ ಸಮುದ್ರದಲ್ಲಿ ಮುಳುಗಿ ಯಾರೋ ಒಬ್ಬರು ಸತ್ತಾಗ ಸಮುದ್ರ ಅಪರಾಧಿಯೆಂದು ಒಂದು ಕೊಡ ಸಮುದ್ರದ ನೀರನ್ನು ಸೆರೆಮನೆಯಲ್ಲಿ ತಂದಿರಿಸಿದರಂತೆ. ಇಂಥ ಹಲವು ಕಥೆಗಳು ಪೋರ್ತುಗೀಸರ ಚಾಡಾಕ್ಷತೆಯ ನಿದರ್ಶನಗಳಾಗಿ ದಿಗ್ದೇಶಗಳಲ್ಲಿ ಹಬ್ಬಿವೆ. ಮೊನ್ನೆ ಮೊನ್ನೆ ಯಾರೋ "ಜಯಹಿಂದ" "ಕ್ವಿಟ್ ಗೋವಾ" ಎಂದು ಒಂದು ರೇಲ್ವೆ ಡಬ್ಬಿಯಲ್ಲಿ ಬರೆದಿದ್ದರೆಂದು ಆ ಡಬ್ಬಿಯನ್ನ "ಬಂಧಿಸಿಟ್ಟ" ರೆಂಬ ಸುದ್ದಿಯನ್ನೋದಿದ ಮೇಲೆ ಈ ಕಥೆಗಳ ಸತ್ಯತ್ವದಲ್ಲಿ ಸಂದೇಹಪಡುವ ಕಾರಣವಿಲ್ಲ. ಇಷ್ಟು ದಡ್ಡರಾಗಿರುವದರಿಂದಲೇ ಪೋರ್ತುಗೀಸ ಸರಕಾರದವರು ಮೊನ್ನೆ "ಗೋವೆಯು ಪೋರ್ತುಗಾಲದ ಅವಿಚ್ಛಿನ್ನ ಭಾಗ [illegible] ಹಿಂದುಸ್ತಾನದಲ್ಲಿ ಎಂದೆಂದೂ ಸೇರಲಾರದು. ಅದು ಬೇರೆಯ ರಾಷ್ಟ್ರ" ಎಂದು ಸಾರಿದರು. ಅಲ್ಲದೆ ಚಳವಳಿಗಾರರನ್ನು ಎದುರಿಸಲು ಒಂದು ಹಳೆಯ ಯುದ್ಧ ಹಡಗವನ್ನು ಕೂಡ ಪೋರ್ತುಗಾಲದಿಂದ ಕಳಿಸಿದ್ದಾರಂತೆ. ಪೋರ್ತುಗಾಲ ದೇಶ ಜಗತ್ತಿನ ನಕಾಶೆಯಲ್ಲಿ ಹಿಂದುಸ್ತಾನದ ಗೂಡ ಹೋಲಿಸಿದರೆ ಎಂಥ ಅಲ್ಪಬಿಂದುವೆಂದು ಅವರಿನ್ನೂ ಕಂಡುಕೊಂಡಿಲ್ಲವೆಂದು ತೋರುತ್ತದೆ. ಸ್ವಾತಂತ್ರ್ಯದ ಪ್ರಾರಂಭದಲ್ಲಿ ಹಿಂದುಸ್ತಾನವೆಷ್ಟೇ ದುರ್ಬಲವಾಗಿದ್ದರೂ ಪೋರ್ತುಗೀಸರಿಗೆ ತಲೆಬಾಗುವಷ್ಟು ದುರ್ಬಲವಾಗಿರಲಾರದು. ಪೋರ್ತುಗೀಸರಿಗೆ ಕಲಿಸಬಲ್ಲವರು ಯಾರೂ ಇಲ್ಲ. ಆದರೆ ಅವರೂ ಬೇಗನೆ ಕಲಿಯಬೇಕಾಗುವದು. ಬೆಳಗಾವಿ ಜಿಲ್ಲೆಯಿಂದ ಮಾಂಸ, ದನಕರುಗಳನ್ನು ಗೋಮಾಂತಕಕ್ಕೆ ನಿರ್ಯಾತ ಮಾಡುವದನ್ನು ನಿಲ್ಲಿಸಿದರೆ ಸಾಕು. ಅಷ್ಟರಿಂದಲೇ ಪೋರ್ತುಗೀಸ ಸಾಹೇಬರು ಹಣ್ಣಾಗು[illegible] "ಧಾರವಾಡ ಹೆಡಕ್ವಾರ್ಟರದ ಪೋಲೀಸ [illegible] ಯೊಂದನ್ನು ಕೊಟ್ಟರೆ ಈ ಪೋರ್ತುಗೀಸರನ್ನು ಓಡಿಸುವೆ" ಎಂದು ಗೋಮಾಂತಕದ ಒಳ ಆಡಳಿತೆಯನ್ನು ಅರಿತುಕೊಂಡ ಮುಂಬಯಿ ಪ್ರಾಂತದ ಪೋಲೀಸ ಅಧಿಕಾರಿಯೊಬ್ಬನು ಖಾಸಗಿ ಮಾತುಕತೆಯಲ್ಲಿ ಹೇಳಿದನೆಂದು ಪ್ರಸಿದ್ಧವಾಗಿದೆ. ಆದುದರಿಂದ ಗೋಮಾಂತಕರ ಭವಿತವ್ಯದ ಬಗೆಗೆ ಚಿಂತಿತರಾಗುವ ಕಾರಣವಿಲ್ಲ. ಅವರಿಗೆ ರಾಜಕೀಯ ಪ್ರೌಢತೆ ಬರುವಂತೆ ಮಾರ್ಗದರ್ಶನ ಮಾಡುವದು ಮಾತ್ರ ಅವಶ್ಯವಿದೆ.

## ನೀರಗುಳ್ಳಿ

ನೀರ ಮೇಲಿನ ಗುಳ್ಳಿ<br>
ಯೊಡೆದು ನಾಲ್ಕಾರಾಗಿ<br>
ಹಿರಿಯ ಗುಳ್ಳಿಯ ಬಳಿಗೆ<br>
ಓಡುತಿ[illegible]

ತಾಯಿ ಮಕ್ಕಳು ಎಂಬ<br>
ಮಾಯೆಯಲಿ ನಲಿನಲಿದು<br>
ಮಾಯವಾದವು — ಎತ್ತೊ<br>
ಓಡುತಿಹವು

ಆಡುತೋಡುತ ಮುಳುಗಿ<br>
ಬೀಳುತೋಡುತ ನಡೆದು<br>
ಮಾಯವಾದವು ತಾಯಿ<br>
ಓಡುತಿಹುದು

ತಾಯಿ ಅಳಿದಿಹುದುಕಿ<br>
ಶೋಕಿಸುತ ಕರೆದಳು<br>
'ಹುಚ್ಚ ನೀ' ನೆನುತೆತ್ತೊ<br>
ಓಡುತಿಹವು

ಕೆ. ವೀರಯ್ಯಾ, ಸಿಗ್ಗಾಂವ



## ಪ್ರಾಥಮಿಕ ಶಿಕ್ಷಕರ ಸಂಬಳ

ಮುಂಬಯಿ ಪ್ರಾಂತದ ಪ್ರಾಥಮಿಕ ಶಿಕ್ಷಕರ ಸಂಬಳದ ಸಂಬಂಧದಲ್ಲಿ ತಿಕ್ಕಾಟವುಂಟಾಗಿ ಸಂಪು ನಡೆಯಿತಷ್ಟೆ. ಅನಂತರ ಮುಖ್ಯ ಹಾಗು ಶಿಕ್ಷಣ ಮಂತ್ರಿಗಳಾದ ಶ್ರೀ ಬಾಳಾಸಾಹೇಬ ಖೇರರ ಆಶ್ವಾಸನದ ಮೇರೆಗೆ ಶಿಕ್ಷಕರು ತಮ್ಮ ಸಂಪನ್ನು ನಿಲ್ಲಿಸಿದರು. ಸರಕಾರದವರಾದರೋ ಈ ಸಮಸ್ಯೆಯ ಸಂಬಂಧದಲ್ಲಿ ದೀರ್ಘ ವಿಚಾರವಿನಿಮಯ ಮಾಡಿ ಈಗ ಅದನ್ನು ನಿರ್ಧರಿಸಿರುವರೆಂದು ಶ್ರೀ ಖೇರರು ಒಂದು ಸಂದರ್ಶನದಲ್ಲಿ ಹೇಳಿದರು. [illegible] ಪಡೆದ ಪ್ರಾಥಮಿಕ ಶಿಕ್ಷಕನ ಕನಿಷ್ಠ ಸಂಬಳವು ೩೦ ರೂಪಾಯಿಯಿದ್ದು, ಅದು ಮುಂದೆ ೭೫ ರೂಪಾಯಿಗಳ ವರೆಗೆ ಏರುತ್ತ ಹೋಗುವದು. ಈ ಮೊದಲು ಈ ಪರಮಾವಧಿ ಸಂಬಳವು ಕೇವಲ ೪೦ ರೂಪಾಯಿ ಇದ್ದಿತು. ಅದನ್ನೀಗ ೭೫ ರೂಗಳಿಗೇರಿಸಲಾಗಿದೆ. ಈ ರೀತಿ ಪ್ರಾಥಮಿಕ ಶಿಕ್ಷಕರ ಸಂಬಳವನ್ನು ಗೊತ್ತುಪಡಿಸಿದ್ದಲ್ಲದೆ ಅಸಿಸ್ಟಂಟ ಡೆಪ್ಯೂಟಿ ಎಜ್ಯುಕೇಶನಲ್ ಇನಸ್ಪೆಕ್ಟರರ ಸ್ಥಳಕ್ಕೆ ಹೆಚ್ಚಿನ ಪ್ರಮಾಣದಲ್ಲಿ ಪ್ರಾಥಮಿಕ ಶಿಕ್ಷಕರನ್ನೇ ನೇಮಿಸಲಾಗುವದೆಂದೂ ಅವರು ಹೇಳಿರುವರು. ಮುಂಬಯಿ ಸರಕಾರದ ಸಂಬಳದ ಈ ಹೊಸ ಯೋಜನೆ ಒತ್ತಾಯದ ಪ್ರಾಥಮಿಕ ಶಿಕ್ಷಣದ ಯೋಜನೆ ಜಾರಿಯಲ್ಲಿ ಬಂದರೆ ಪ್ರತಿವರ್ಷ ಒಂದು ಕೋಟಿ ರೂಪಾಯಿಗಳ ವೆಚ್ಚ ತಗಲುವದೆಂದು ಅಂದಾಜ ಮಾಡಲಾಗಿದೆಂದೂ ಅವರು ಹೇಳಿದರು. ಪ್ರಾಥಮಿಕ ಶಿಕ್ಷಕರ ಸಂಬಳ ಬೇಡಿಕೆಯನ್ನು ನೋಡಿದರೆ ಇದು ಕಡಮೆಯೆಂದೆನಿಸಬಹುದು ಆದರೆ ಈಗಿದ್ದ ಪ್ರಮಾಣ ಮತ್ತು ಬೇರೆ ಪ್ರಾಂತಗಳಲ್ಲಿ ಶಿಕ್ಷಕರಿಗೆ ಸಿಕ್ಕುತಿರುವ ಪ್ರಮಾಣಗಳನ್ನು ಹೋಲಿಸಿ ನೋಡಿದರೆ ಸದ್ಯದ ಸಂಬಳ ಪ್ರಮಾಣವು ಸಮಾಧಾನಕರವಾಗಿದೆಂದು ತೋರುವದು. ಶಿಕ್ಷಕರು ಕಾಂಗ್ರೆಸ ಮುಖ್ಯ ಮಂತ್ರಿಗಳ ಮೇಲೆ ವಿಶ್ವಾಸವಿಟ್ಟು ಅನಿರ್ಬಂಧ ಸಂಪು ಹಿಂತೆಗೆದುಕೊಂಡಿದ್ದರು. ಮುಖ್ಯ ಮಂತ್ರಿಗಳೂ ಪರಿಸ್ಥಿತಿಯನ್ನು ಪೂರ್ಣ ವಿಚಾರಿಸಿ ಅವರಿಗೆ ಯೋಗ್ಯ ಪರಿಹಾರ ಕೊಟ್ಟರು. ಶಿಕ್ಷಕರು ಇದರಿಂದ ಸಮಾಧಾನ ಹೊಂದಿ ಶಿಕ್ಷಣದಂಥ ಪವಿತ್ರ ಕಾರ್ಯವನ್ನು ಒಳ್ಳೆ ಹೊಣೆಗಾರಿಕೆಯಿಂದ ನಿರ್ವಹಿಸುವರೆಂದು ನಂಬುತ್ತೇವೆ.

## ಪಡಭೂಮಿಗಳು

ಪಡಭೂಮಿಗಳನ್ನು ಸಾಗುಮಾಡುವುದರ ಸಂಬಂಧದಲ್ಲಿ ಮುಂಬಯಿ ಸರಕಾರದವರು ಯೋಚಿಸಿದ್ದಾರೆ. ಸದ್ಯದ ಆಹಾರ ದುಃಸ್ಥಿತಿಯಲ್ಲಿ ಈ ಯೋಜನೆಯು ಲಾಭಕರವೆಂದು ಬೇರೆ ಹೇಳಬೇಕಿಲ್ಲ. ಒಂದೇಕಡೆಗಿದ್ದ ನೂರು ಎಕರೆ ಭೂಕ್ಷೇತ್ರವನ್ನು ಸಹಕಾರ ಪದ್ಧತಿಯಿಂದ [illegible]ನ ಸೈನಿಕರಿಗೆ ಇಲ್ಲವೆ ಬೇರೆ ಜನರಿಗೆ ಕೊಡಬೇಕೆಂದು ಸರಕಾರದವರು ಗೊತ್ತುಪಡಿಸಿದ್ದಾರೆ. ಅಂತೆಯೆ ಈ ಬಗೆಯ ಭೂಕ್ಷೇತ್ರವನ್ನು ಪೂರ್ಣ ವಿಚಾರಮಾಡದೆ ಯಾರಿಗೂ ಕೊಡಬಾರದೆಂದು ಕಲೆಕ್ಟರರಿಗೆ ತಿಳಿಸಲಾಗಿದೆಂದು ಮುಂತಾಗಿ ಸರಕಾರದ ಪ್ರಕಟನೆ ಹೊರಟಿದೆ. ಆದರೆ ೧೦೦ ಎಕರೆಗಿಂತ ಕಡಿಮೆ ಕ್ಷೇತ್ರವಿದ್ದ ಪ್ರದೇಶವನ್ನು ಹಿಂದಿನ ಸೈನಿಕರಿಗಾಗಲಿ ಇತರರಿಗಾಗಲಿ ಕೊಡಬಹುದೆಂದು ಕಲೆಕ್ಟರರಿಗೆ ತಿಳಿಸಲಾಗಿದೆಂದು ಮುಂತಾಗಿ ಪ್ರಕಟಿಸಲಾಗಿದೆ. ಹಿಂದುಸ್ತಾನದಲ್ಲಿ ಪಡಭೂಮಿ ವಿಪರೀತ ಬಿದ್ದಿದೆ. ಅದನ್ನೆಲ್ಲ ಸಾಗುಮಾಡಿದರೆ ಆಹಾರ ಪರಿಸ್ಥಿತಿ ಬಹಳ ಮಟ್ಟಿಗೆ ಸುಧಾರಿಸುವದು. ಆದರೆ ಬರಿ ಪಡಭೂಮಿಗಳನ್ನು ಕೊಡುವುದರಿಂದ ಉದ್ದಿಷ್ಟವು ಸಾಧಿಸಲಾರದು. ಆಯಾ ರೈತರಿಗೆ ಇತರ ಅನುಕೂಲತೆಗಳನ್ನೂ ಕಲ್ಪಿಸಿಕೊಡಬೇಕು. ವಿಶೇಷತಃ ಹಿಂದಿನ ಸೈನಿಕರಿಗೆ ಬರಿ ಭೂಮಿಗಳನ್ನು ಕೊಡುವುದರಿಂದ ಯಾವ [illegible]ಜನವೂ ಆಗದು. ಅವರು ಸೈನ್ಯಖಾತೆಯಲ್ಲಿ ಬೇಕಾದಷ್ಟು ಚೈನಿಯಿಂದಿದ್ದವರು. ಒಕ್ಕಲತನದಂಥ ಕಷ್ಟಕರ ಕೆಲಸವನ್ನು ಮಾಡಲು ಎಷ್ಟರ ಮಟ್ಟಿಗೆ ಅವರು ಸಮರ್ಥರಾಗುವರೋ ನೋಡಬೇಕಾಗಿದೆ. ಅವರಿಗೆ ಒಕ್ಕಲತನ ತರಬೇತಿಯ ಶಿಕ್ಷಣವನ್ನು ಕೊಡಬೇಕಾದುದೂ ಅತ್ಯವಶ್ಯ. ಸೈನಿಕರು ಸ್ವತಃ ಹೊಲಮಾಡದೆ ಎರಡನೆಯವರಿಗೆ ಹೊಲಮಾಡಲು ಕೊಟ್ಟರೆ ಸರಕಾರದ ಉದ್ದಿಷ್ಟ ಸಾಧಿಸದು. ಆದುದರಿಂದ ಕೇವಲ ಯುದ್ಧದಲ್ಲಿ ನವಕರಿ ಮಾಡಿರುವರೆಂಬ ಒಂದೇ ಕಾರಣದಿಂದ ಸ್ವತಃ ಒಕ್ಕಲತನ ಮಾಡದಿದ್ದವರಿಗೆ ಪಡಭೂಮಿ ಕೊಡುವುದು ಯಾವರೀತಿಯಿಂದಲೂ ಪ್ರಯೋಜನಕಾರಿಯಾಗದು. ಸರಕಾರದವರೂ ಅವರ ಸಲಹೆಯಂತೆ ಭೂಮಿಗಳನ್ನು ಕೊಡುವ ಕಲೆಕ್ಟರರೂ ಈ ಸಂಬಂಧದಲ್ಲಿ ಹೆಚ್ಚು ದಕ್ಷತೆ ವಹಿಸಿ ಪಡಭೂಮಿಗಳನ್ನು ಕೂಡಲೆ ಸಾಗುಮಾಡಹಚ್ಚಿ ಹಿಂದುಸ್ತಾನದ ಆಹಾರ ಪರಿಸ್ಥಿತಿಯನ್ನು ಸುಧಾರಿಸಬೇಕೆಂದು ಆಗ್ರಹಪಡಿಸುತ್ತೇವೆ.

## ಸಂಪಾದಕೀಯ

# ಟೀಕೆ-ಟಿಪ್ಪಣೆಗಳು

### ಎಂಟು ಜಿಲ್ಲೆಗಳಲ್ಲಿ ಪಾನನಿರೋಧ

ಮದ್ರಾಸ ಸರಕಾರದವರು ವಿಧಾಯಕ ಕಾರ್ಯಕ್ರಮದಲ್ಲಿ ಮುಂದಡಿಯಿಡುತಿರುವುದು ಅಭಿನಂದನೀಯ ಸಂಗತಿ. ಆಹಾರ ಬಟ್ಟೆ ಸಂಬಂಧದಲ್ಲಿ ಅವರು ಕೈಕೊಂಡ ಯೋಜನೆ ಬಗ್ಗೆ ಈಗಾಗಲೆ ಬರೆದದ್ದಾಗಿದೆ. ಮದ್ಯಪಾನ ಪ್ರತಿಬಂಧದ ಬಗ್ಗೆಯೂ ಅವರೊಳ್ಳೆ ಸಮಂಜಸ ಧೋರಣ ವಹಿಸಿರುವರು. ಪ್ರಾಂತದಲ್ಲಿ ಎಂಟು ಜಿಲ್ಲೆಗಳಲ್ಲಿ ಮದ್ಯಪಾನ ಪ್ರತಿಬಂಧವನ್ನು ಜಾರಿಯಲ್ಲಿ ತಂಬೇಕೆಂದು ನಿರ್ಧರಿಸಿದ್ದಾರೆ. ಮದ್ರಾಸ ಪ್ರಾಂತವು ಈ ಮೊದಲೆ ಮದ್ಯಪ್ರತಿಬಂಧವನ್ನು ಯಶಸ್ವಿಯಾಗಿ ಮಾಡಿ ತೋರಿಸಿದ ಇಡೀ ಪ್ರಾಂತದಲ್ಲಿ ಮದ್ಯಪಾನವನ್ನು ಜಾರಿಯಲ್ಲಿ ತರಲಾಗುವದೆಂದು ಮದ್ರಾಸದ ಹಿಂದಿನ ಕಾಂಗ್ರೆಸ ಸರಕಾರವು ಮಾರಾಟಕರವನ್ನು ಹೇರಿತು. ಮದ್ಯಪಾನ ಪ್ರತಿಬಂಧದಿಂದಾಗುವ ಹಾನಿಯನ್ನು ತುಂಬಿಕೊಳ್ಳುವದೇ ಇದರ ಉದ್ದೇಶ. ಮುಂದೆ ಕಾಂಗ್ರೆಸ ಮಂತ್ರಿಮಂಡಳ ರಾಜೀನಾಮೆ ಕೊಟ್ಟು ಗವರ್ನರರ ಸಲಹೆಗಾರ ಆಡಳಿತ ಪ್ರಾರಂಭವಾಯಿತು. ಅವರು ಮದ್ಯಪಾನ ಪ್ರತಿಬಂಧ ಧೋರಣ ಬಿಟ್ಟುಗೊಟ್ಟರು. ಕಾರಾಟಕ ಎತ್ತುವದು ಹಾಗೇ ಸಾಗಿದರೂ ಅದರಿಂದ ಬಂದ ಹಣಕ್ಕೆ ಕೈಹಚ್ಚುವ ಧೈರ್ಯ ಅವರಿಗಾಗಲಿಲ್ಲ. ಆ ಕರವೀಗ ೩೦ ಕೋಟಿ ೪೧ ಲಕ್ಷದಷ್ಟಾಗಿದೆ. ಹೀಗಿದ್ದರೂ ಸರಕಾರದವರು ಪೂರ್ಣ ಮದ್ಯಪಾನ ಪ್ರತಿಬಂಧ ಧೋರಣ ವಹಿಸದಿದ್ದುದಕ್ಕೆ ಅನೇಕರು ಸರಕಾರವನ್ನು ಟೀಕಿಸುತಿರುವರು. ಯುದ್ಧೋತ್ತರ ಕಾರ್ಯಕ್ಕೆ ಹೆಚ್ಚು ಹಣ ಬೇಕಾಗಿದ್ದರಿಂದ ಪೂರ್ಣ ಮದ್ಯಪಾನ ಪ್ರತಿಬಂಧ ಮಾಡಿ ಹಾನಿಗೊಳಗಾಗಲು ಸರಕಾರ ಹಿಂಜರಿಯುತ್ತದೆ. ಆದರೆ ಕುಡುಕತನವನ್ನು ನಿಲ್ಲಿಸುವುದರಿಂದ ಜನತೆಯ ಆರ್ಥಿಕ ಪರಿಸ್ಥಿತಿ ಸುಧಾರಿಸಿ ಅದರ ಕೊಳ್ಳುವ ಶಕ್ತಿ ಬೆಳೆವುದೆಂದೂ ಆದರಿಂದ ಸರಕಾರದ ಉತ್ಪನ್ನ ಹೆಚ್ಚುವದೆಂದೂ ಹಿಂದಿನ ಕಾಂಗ್ರೆಸ ಸರಕಾರದ ಮುಖ್ಯ ಮಂತ್ರಿಗಳಾದ ರಾಜಾಜಿಯವರು ಅನುಭವದಿಂದ ಹೇಳಿದ್ದಾರೆ. ಮದ್ರಾಸ ಮಂತ್ರಿ ಮಂಡಳದವರು ಇತ್ತ ಗಮನಿಸುವುದವಶ್ಯವೆಂದು ತೋರುತ್ತದೆ. ಮೊದಲು ನಾಲ್ಕು ಜಿಲ್ಲೆಗಳಲ್ಲಿ ಮಾತ್ರವೆ ಮದ್ಯಪಾನವನ್ನು ಪ್ರತಿಬಂಧಿಸಬೇಕೆಂದು ಬಗೆದಿದ್ದ ಮಂತ್ರಿಮಂಡಳವೀಗ ಎಂಟು ಜಿಲ್ಲೆಗಳಲ್ಲಿ ಪಾನ ಪ್ರತಿಬಂಧ ಮಾಡಲು ನಿರ್ಧರಿಸಿದ್ದು ತುಂಬ ಅಭಿನಂದನೀಯವಾಗಿದೆ. ಜನತೆಯು ಅವರಿಗೆ ಪೂರ್ಣ ಸಹಕಾರ ನೀಡಿ ಅವರ ಕಾರ್ಯವನ್ನು ಯಶಸ್ವಿ ಮಾಡಬೇಕೆಂದು ಸೂಚಿಸುತ್ತೇವೆ.

### ಗೋಮಾಂತಕದ ಭವಿತವ್ಯ

ಗೋಮಾಂತಕದ ಹಿಂದಿನ ಇತಿಹಾಸ ಇಂದು ಅಲ್ಲಿ ನಡೆದಿರುವ ಚಟುವಟಿಕೆ ಸರಕಾರದವರು ನಡೆಸಿದ ದಬ್ಬಾಳಿಕೆ ಮುಂತಾದ ವಿಷಯಗಳನ್ನು ಹಿಂದಿನ ಮತ್ತು ಈ ಸಲದ ಸಂಚಿಕೆಗಳಲ್ಲಿ ವಿವರವಾಗಿ ಪ್ರಸಿದ್ಧಿಸಿದ್ದೇವೆ. ಹಿಂದುಸ್ತಾನದಲ್ಲಿ ಆದ ರಾಜಕೀಯ ಪ್ರಾಜ್ಞೆಯ ಪರಿಣಾಮ ಗೋಮಾಂತಕದ ಮೇಲೆ ಅಷ್ಟೇ ಅಲ್ಲ ಇಡೀ ಜಗತ್ತಿನ ಬೇರೆ ರಾಷ್ಟ್ರಗಳ ಮೇಲೆಯೂ ಆಗುತ್ತಿದೆಂಬುದು ನಿರ್ವಿವಾದ. ಇದನ್ನರಿತು ಪೋರ್ತುಗೀಜ ಸರಕಾರವು ಜನತೆಗೆ ಹಕ್ಕುಬಾಧ್ಯತೆಗಳನ್ನು ಕೊಟ್ಟು ಬ್ರಿಟಿಶರು ಇಲ್ಲಿಂದ ಕಾಲ್ತೆಗೆಯುವಾಗ ಅವರ ಗೂಡನೆ ತಾವೂ ಸ್ವದೇಶಕ್ಕೆ ಮರಳುವದು ಹಿತಕರ. ತಮ್ಮ ಹಿಂಸಾ ಶಕ್ತಿಯ ಬಲುಮೆಯಿಂದ ಇಲ್ಲವೆ ಬ್ರಿಟಿಶರ ಬೆಂಬಲದ ಮದದಿಂದ ಜನತೆಯನ್ನು ಛಲಿಸುವ ಧೋರಣವನ್ನು ಅವರು ವಹಿಸಿದರೆ ಅದೆಂದಿಗೂ ಸಾಧ್ಯವಾಗದು. ಹಿಂದುಸ್ತಾನದ ಧುರೀಣರು ಇದೆ ಬಗೆಯ ಸಲಹೆಯನ್ನು ಪೋರ್ತುಗೀಜ ಸರಕಾರಕ್ಕೆ ಕೊಟ್ಟಿರುವರು. ಆದರೆ ಪೋರ್ತುಗೀಜ ಸರಕಾರದವರು ಇದರ ಪೂರ್ವವನ್ನರಿತುಕೊಳ್ಳದೆ ದಬ್ಬಾಳಿಕೆಯ ಧೋರಣವನ್ನು ವಹಿಸುತಿರುವುದು ಶೋಚನೀಯ ಸಂಗತಿ. ಪೋರ್ತುಗೀಜ ಹಿಂದುಸ್ತಾನ ಸರಕಾರವು ಪ್ರಕಟನೆಯೊಂದನ್ನು ಹೊರಡಿಸಿ "ಪೋರ್ತುಗೀಜ ಹಿಂದುಸ್ತಾನವು ಪೋರ್ತುಗಾಲದ ಅವಿಚ್ಛಿನ್ನ ಭಾಗವಾಗಿದೆ; ಅದು ಬ್ರಿಟಿಶ ಹಿಂದುಸ್ತಾನದಿಂದ ಪ್ರತ್ಯೇಕವಾಗಿದ್ದು ಅದರಲ್ಲಿ ಎಂದೂ ಕೂಡಿಕೊಳ್ಳಲಾರದೆಂದು ಸರ್ವರಿಗೂ ಕೊನೆಯ ಸಲ ತಿಳಿದಿರಲಿ" ಎಂದು ಮುಂತಾಗಿ ಸಾರಿದ್ದಾರೆ. ಅಲ್ಲದೆ ತಮ್ಮ ಧೋರಣವನ್ನು ಆಡಳಿತವನ್ನೂ ಸಮರ್ಥಿಸಿಕೊಂಡಿದ್ದಾರೆ. "ಪೋರ್ತುಗೀಜರು ನಾಲ್ಕು ನೂರು ವರ್ಷಗಳ ಆಡಳಿತದಲ್ಲಿ ವರ್ಣ ಮತ್ತು ಜಾತಿದ್ವೇಷಕ್ಕೆ ಸ್ಥಾನ ಕೊಟ್ಟಿರುವದಿಲ್ಲ. ಕಾಯದೆ ದೃಷ್ಟಿಯಲ್ಲಿ ಪ್ರಜೆಗಳೆಲ್ಲ ಒಂದೇ ಎಂಬ ಧೋರಣೆಯಿಂದಲೆ ಆಡಳಿತ ನಡೆಸಿದೆ" ಎಂದು ಮುಂತಾಗಿ ಹೇಳಿ, ಕಾಯದೆಯ ದುರುಪಯೋಗ ಮಾಡುವವರನ್ನು ತಡೆಯಲು ಕಾಂಗ್ರೆಸ್ ಪ್ರಾಂತಗಳಲ್ಲಿ ಕೂಡ ಬಲವನ್ನು ಉಪಯೋಗಿಸಲಾಗುತ್ತದೆಂದು ಮುಂತಾಗಿ ಆತ್ಮಸಮರ್ಥನೆ ಮಾಡಿಕೊಂಡಿರುವರು. ಪರಿಸ್ಥಿತಿ ಹೀಗಿರುವಾಗ ಕೆಲ ಪತ್ರಿಕೆಗಳು ಅಪಪ್ರಚಾರ ನಡೆಸಿವೆಂದು ಮುಂತಾಗಿ ಅವುಗಳ ಮೇಲೆ ಹರಿಹಾಯ್ದಿದ್ದಾರೆ. ಆದರೆ ವಸ್ತುಸ್ಥಿತಿ ತದ್ವಿರುದ್ಧವಾಗಿದೆಂಬುದು ಗೋಮಾಂತಕದಲ್ಲಿ ಸಂಚರಿಸಿ ಬಂದ ನಿಷ್ಪಕ್ಷಪಾತ ಯಾವ ಮನುಷ್ಯನಿಗೂ ಕಂಡು ಬರದಿಂದು. ಸಾರ್ವಜನಿಕಸಭೆ, ಸಂಘ ಸ್ವಾತಂತ್ರ್ಯಗಳ ಮೇಲೆ ಗದಾಪ್ರಹಾರ ಮಾಡುವದು ಯಾವ ರೀತಿಯಿಂದಲೂ ಕ್ಷಮ್ಯವಾಗಲಾರದು. ಆದುದರಿಂದ ಈ ರೀತಿ ಕೇವಲ ಪೊಳ್ಳು ಸಮರ್ಥನೆ ಮಾಡಿಕೊಳ್ಳುವುದಕ್ಕಿಂತ ಆಡಳಿತದಲ್ಲಿಯ ಕೊಳೆಯನ್ನು ಕಿತ್ತಿ ಹಾಕಲು ಪ್ರಯತ್ನಿಸಬೇಕು. ಪೋರ್ತುಗೀಜವನ್ನು ಬಿಟ್ಟುಗೊಡುವುದಿಲ್ಲೆಂದು ಹಟ ಹಿಡಿಯುವುದು ಎಂದಿಗೂ ನ್ಯಾಯ್ಯವಾಗದು. ಇಡೀ ಹಿಂದುಸ್ತಾನದಲ್ಲಿ ಆಡಳಿತ ನಡೆಸಿದ ಬ್ರಿಟಿಶರೆ ಇಂದು ಗುಡಚಾಪಿ ಕಟ್ಟಲು ಸಿದ್ಧರಾಗಿರುವಾಗ ಎಲ್ಲಿಯೋ ಮೂಲೆಯಲ್ಲಿ ಕೆಲ ಭಾಗವನ್ನು ವ್ಯಾಪಿಸಿದ ಪೋರ್ತುಗೀಜರು ಸಾಮ್ರಾಜ್ಯಲಾಲಸೆಯನ್ನು ತೋರಿಸಿ ಮನಬಂದಂತೆ ಪ್ರಕಟನೆ ಹೊರಡಿಸುವುದು ಇಷ್ಟ ನಾಗದು. ಆದುದರಿಂದ ಪೋರ್ತುಗೀಜ ಸರಕಾರದವರು ನಾಡಿನ ಜನತೆಯ ನಾಡಿಗಳನ್ನು ತಿಳಿದುಕೊಂಡು ತದನುಸಾರವಾಗಿ ತಮ್ಮ ಧೋರಣವನ್ನು ಮಾರ್ಪಡಿಸಿಕೊಳ್ಳಬೇಕೆಂದು ಒತ್ತಾಯಪಡಿಸುತ್ತೇವೆ.

### ಹಿಂದುಸ್ತಾನದಲ್ಲಿ ಸಂಪುಗಳು

ಹಿಂದುಸ್ತಾನದಲ್ಲಿ ಇತ್ತೀಚೆ ಸಂಪುಗಳ ಪಿಡುಗು ಪ್ರಾರಂಭವಾಗಿದೆ. ಯಾವ ಶಾಖೆಯಲ್ಲಿ ನೋಡಿದರೂ ಸಂಪಿನ ಮಾತುಗಳೇ ಕೇಳಬರುತಿವೆ. ಕೆಲ ಸಂಪುಗಳಿಗೆ ವಿಶಿಷ್ಟ ಕಾರಣಗಳಿದ್ದರೆ ಇನ್ನಿತರ ಸಂಪುಗಳು ಕೇವಲ ಕಿಡಿಗೇಡಿಗಳು ರಾಜಕೀಯ ಉದ್ದೇಶದಿಂದ ಎಬ್ಬಿಸಿದವುಗಳಿರುತ್ತವೆ. ಕಾರಣಗಳೇನೇ ಇರಲಿ ಸಂಪುಗಳಿಂದ ಸಾರ್ವಜನಿಕರಿಗೆ ಹಾನಿ ಆಗಿಯೇ ತೀರುವುದು. ಇತ್ತೀಚೆ ನಡೆದ ಅಂಚೆ ಪೇಡೆಗಳ ಸಂಪಿನಿಂದ ಹಿಂದುಸ್ತಾನದಲ್ಲಿ ಲಕ್ಷಾವಧಿ ರೂಪಾಯಿಗಳ ಹಾನಿ ಜನತೆಗೆ ಆಯಿತಲ್ಲದೆ ವಿಪರೀತ ತೊಂದರೆಯೂ ಆಯಿತು. ವ್ಯವಹಾರವೆಲ್ಲ ಕಟ್ಟಾಯಿತು. ಈ ರೀತಿ ಸಂಪುಗಳಿಂದ ಆಗುತಿರುವ ಅನರ್ಥವನ್ನು ಕಂಡ-ಹಿಡಿದ, ಅವುಗಳು ಹೂಡಲ್ಪಡದಂತೆ ನೋಡಿಕೊಳ್ಳುವುದು ಸರಕಾರದ ಮತ್ತು ಸಾರ್ವಜನಿಕ ಧುರೀಣರ ಕರ್ತವ್ಯವಾಗಿದೆ. ಅಂತೆಯೆ ಮಹಾತ್ಮಾ ಗಾಂಧಿ, ಪಂಡಿತ ಜವಾಹರಲಾಲ ನೆಹರು, ಸರದಾರ ವಲ್ಲಭಭಾಯಿ ಪಟೇಲ ಮೊದಲಾದ ಧುರೀಣರು ಈ ಸಂಪುಗಳತ್ತ ತಮ್ಮ ಲಕ್ಷವನ್ನು ಹೊರಳಿಸಿರುವರು. ಪ್ರಸಿದ್ಧ ಅರ್ಥಶಾಸ್ತ್ರಜ್ಞರಾದ ಪ್ರೊ. ಪಿ. ಎ. ವಾಡಿಯಾರವರು ಈ ಸಂಪುಗಳ ಕಾರಣಗಳನ್ನು ವಿಮರ್ಶಿಸುತ್ತ ಅತಿಪ್ರಸರಣವೆ ಮುಖ್ಯ ಕಾರಣವೆಂದು ಪ್ರತಿಪಾದಿಸಿರುವರು. ಪಂಡಿತ ಜವಾಹರಲಾಲರು ಅತಿಪ್ರಸರಣದಿಂದ ನಮ್ಮ ಜಾಗತಿಕ ಪರಿಸ್ಥಿತಿಯು ಬದಲಾಗಿದ್ದು ಅದರ ಪ್ರತಿಕ್ರಿಯೆಯೆ ಸಂಪೆಂದು ಹೇಳಿರುವರು. ಇಂದಿನ ನಮ್ಮ ಸಮಾಜದಲ್ಲಿರುವ ಆರ್ಥಿಕ ವೈಷಮ್ಯ, ಜನತೆಯ ಜೀವನಾಧಾರಕ್ಕೆ ಬೇಕಾದ ಸಾಮುಗ್ರಿಗಳು ವಿಪರೀತ ಏರಿದ್ದರಿಂದ ಜನತೆಗೆ ಆಯಾ ವಸ್ತುಗಳು ಸಿಕ್ಕದೆ ತೊಂದರೆಯಾಗುತಿರುವುದೂ ಸಂಪಿಗೆ ಕಾರಣ. ಈ ಕಾರಣಗಳನ್ನು ದೂರ ಮಾಡಲು ಪ್ರಯತ್ನಿಸುವುದವಶ್ಯವಾಗಿದೆ. ಇನ್ನು ಕೆಲಸಗಾರರಾದರೂ ಸಂಪು ಹೂಡುವ ಮೊದಲು ಬೇರೆ ಎಲ್ಲ ಬಗೆಯಿಂದ ತಮ್ಮ ಬೇಡಿಕೆಗಳನ್ನು ಪಡೆಯಲು ಪ್ರಯತ್ನಿಸಬೇಕು. ಅನಂತರವಾದರೂ ಮಹಾತ್ಮಾ ಗಾಂಧಿಯವರು ಉಪದೇಶಿಸಿದಂತೆ ನಿಷ್ಪಕ್ಷಪಾತ ಮಧ್ಯಸ್ಥನ ವಿಚಾರಕ್ಕೆ ತಮ್ಮ ಬೇಡಿಕೆಗಳನ್ನೊಪ್ಪಿಸಬೇಕು. ಆರ್ಥಿಕ ಕಾರಣಗಳಿಗಾಗಿ ಹೂಡಲ್ಪಡುವ ಸಂಪುಗಳಿಗೆ ರಾಜಕೀಯ ಬಣ್ಣ ಬಳಿಯಬಾರದೆಂದು ಗಾಂಧಿಜಿಯವರು ಹೇಳಿದ್ದು ಯುಕ್ತೋಚಿತವಾಗಿದೆ. ಕೆಲಸಗಾರರಿಗೆ ಪರಿಹಾರ ಸಿಕ್ಕಲಿ ಸಿಕ್ಕದಿರಲಿ ಅವರಲ್ಲಿ ಒಂದು ಬಗೆಯ ಅಸಂತೋಷವನ್ನು ಹುಟ್ಟಿಸಿ ಕೂಲಿಕಾರರ ಮುಖಂಡರು ತಾವೆಂದು ಹೇಳಿಕೊಳ್ಳುವ ವ್ಯಕ್ತಿಗಳೂ ಪಕ್ಷಗಳೂ ಉಂಟು. ತಮ್ಮೀ ಮನೆಮುರುಕ ಧೋರಣದಿಂದ ಕೆಲಸಗಾರರಿಗೆ ಮತ್ತು ಸಾರ್ವಜನಿಕರಿಗಾಗುತಿರುವ ಕಷ್ಟನಷ್ಟಗಳತ್ತ ಇವರು ಗಮನಿಸುವುದವಶ್ಯ. ಕೇವಲ ತಮ್ಮ ರಾಜಕೀಯ ಉದ್ದೇಶ ಸಾಧನೆಗಾಗಿ ಅವರಿಂತು ಸಮಾಜದಲ್ಲಿ ಅಸಂತೋಷದ ಬೀಗೆ ಹಬ್ಬಿಸುವುದು ಸರಿಯಲ್ಲ. ಈ ಪರಿಸ್ಥಿತಿಯಲ್ಲಿ ಆಯಾ ಜನರು ತಮ್ಮ ಹೊಣೆಗಾರಿಕೆಯನ್ನರಿತುಕೊಂಡು ವರ್ತಿಸುವರೆಂದು ನಂಬಿದ್ದೇವೆ.

### ಸೂಕ್ತ ಸಲಹೆ

ಮುಸ್ಲಿಂಲೀಗಿನವರ ಹಟಮಾರಿತನದ ಧೋರಣದಿಂದ ಮತ್ತು ಅಧಿಕಾರತ್ಯಾಗವನ್ನು ಅದಷ್ಟು ಬೇಗ ಮಾಡಬೇಕೆಂಬ ಬ್ರಿಟಿಶ್ ಸರಕಾರದವರ ಪ್ರವೃತ್ತಿಯ ಪರಿಣಾಮವಾಗಿ ಹಿಂದೀ ಸಮಸ್ಯೆಯಿನ್ನೂ ಕೊಳೆಯುತ್ತಲೆ ಬಿದ್ದಿದೆ. ಮುಸ್ಲಿಂಲೀಗಿನವರಂತೂ ಈಗ ಅಸಹಕಾರದ ಧೋರಣವನ್ನು ವಹಿಸಿದ್ದರಿಂದ ಬ್ರಿಟಿಶ್ ಸರಕಾರದವರು ಬಹುಮತದ ಪಕ್ಷಕ್ಕೆ ಅಧಿಕಾರವನ್ನೊಪ್ಪಿಸಿ ಕೊಡಲು ಧೈರ್ಯಮಾಡಲೊಲ್ಲರು. ಬಹುಸಂಖ್ಯಾಕ ಪಕ್ಷದವರಿಗೆ ಅಧಿಕಾರ ಒಪ್ಪಿಸಿದ್ದಾದರೆ ಹಿಂದುಸ್ತಾನದಲ್ಲಿ ಎಲ್ಲಿ ಏನಾಗುವುದೋ ಎಂಬ ಭೀತಿ ಅವರಿಗೆ. ಲಂಡನದ ನ್ಯೂಜ ಕ್ರಾನಿಕಲ್ಲಿನಂಥ ಮಹತ್ವದ ಪತ್ರಿಕೆಯ ವಿಶೇಷ ಸುದ್ದಿಗಾರರು ಮಹಾತ್ಮಾ ಗಾಂಧಿಯವರ ವ್ಯಕ್ತಿತ್ವದ ಬಗ್ಗೆ ಲೇಖ ಬರೆಯುತ್ತ ಸರಕಾರಕ್ಕೆ ಈಸಂಬಂಧದಲ್ಲಿ ಸೂಕ್ತ ಸಲಹೆಕೊಟ್ಟಿದ್ದಾರೆ "ಹಿಂದುಸ್ತಾನದ ಸಮಸ್ಯೆ ಬಗೆಹರಿಯಬೇಕಾದರೆ ಪ್ರಜಾಸತ್ತಾತ್ಮಕ ರೂಢಿಯಂತೆ ಅಧಿಕಾರವನ್ನು ಬಹುಸಂಖ್ಯಾಕ ಪಕ್ಷಕ್ಕೆ ಒಪ್ಪಿಸುವುದೊಂದೇ ಉಪಾಯ. ತಿಮಗೆ ಅಧಿಕಾರ ಒಪ್ಪಿಸಿದರೆ ಅಲ್ಪಸಂಖ್ಯಾಕರನ್ನು ಹೇಗೆ ನಡೆಸಿಕೊಳ್ಳುವಿರಿ ಎಂದು ಕಾಂಗ್ರೆಸ್ಸಿಗರನ್ನು ಕೇಳಿದರೆ "ಅವರು ನಮ್ಮ ಬಾಂಧವರು ನಮಗೆ ಸ್ವರಾಜ್ಯ ಸಿಕ್ಕರೆ ಅಲ್ಪಸಂಖ್ಯಾಕರನ್ನು" ಮುಸಲ್ಮಾನರನ್ನು ಔದಾರ್ಯದಿಂದ ಹಾಗು ಸಮಂಜಸ ರೀತಿಯಲ್ಲಿ ನಾವು ನಡೆಸಿಕೊಳ್ಳುವೆವು. ಇದು ನಮಗೆ ಸಂಬಂಧಿಸಿದ ವಿಷಯವಾದ್ದರಿಂದ ಇದರಲ್ಲಿ ಬ್ರಿಟಿಶರು ಕೈ ಹಾಕಬಾರದು. ಶಾಂತ ರೀತಿಯಿಂದ ಅಧಿಕಾರವನ್ನು ನಮಗೊಪ್ಪಿಸುವುದಿಷ್ಟೆ ಅವರ ಕೆಲಸ. ಉಳಿದುದೆಲ್ಲವನ್ನು ನಾವೇ ನೋಡಿಕೊಳ್ಳುವೆವು.'' ಎಂದು ಕಾಂಗ್ರೆಸಿಗರು ಉತ್ತರ ಕೊಡುತ್ತಾರೆ. ಎಂದು ಮುಂತಾಗಿ ಅವರು ಬರೆದಿರುತ್ತಾರೆ. ನ್ಯೂಸ್ ಕ್ರಾನಿಕ್ಲ್ ಈ ಸೂಚನೆ ಸಮಂಜಸವಾಗಿದೆಂದು ಬೇರೆ ಹೇಳಬೇಕಿಲ್ಲ. ಮುಸ್ಲಿಂ ಲೀಗಿನ ಕಾರ್ಯದರ್ಶಿಗಳಾದ ಶ್ರೀ ಲಿಯಾಕತ ಅಲ್ಲಿಖಾನರು ಇತ್ತೀಚೆ ಕೊಟ್ಟ ಸಂದರ್ಶನದಲ್ಲಿಯ ಅಬ್ಬರವನ್ನು ನೋಡಿದರೆ ಹಿಂದುಸ್ತಾನದಲ್ಲಿ ಬಹುಸಂಖ್ಯಾಕರ ಆಡಳಿತವನ್ನು ಅವರು ಎಲ್ಲ ಬಗೆಯಿಂದ ವಿರೋಧಿಸುವರೆಂಬುದು ಸ್ಪಷ್ಟವಾಗುವದು. ಇದರ ಅರ್ಥವೆಂದರೆ ಹಿಂದುಸ್ತಾನದ ಹಿತದೃಷ್ಟಿಯಿಂದ ಬಹುಸಂಖ್ಯಾಕರೊಡಗೂಡಿ ತಾವೂ ಆಡಳಿತದಲ್ಲಿ ಭಾಗವಹಿಸುವದಿಲ್ಲ; ಎರಡನೆಯವರು ಆಡಳಿತ ನಡೆಸಲು ಸಿದ್ಧರಾದರೆ ಅದಕ್ಕೆ ಅಡ್ಡಗಾಲು ಬಡಿಯುವರು. ಈ ಬಗೆಯ ಧೋರಣೆಯಿಂದ ಹಿಂದುಸ್ತಾನದ ಹಿತವೆಂದಿಗೂ ಆಗದು ಈ ಮಾತು ಮುಸ್ಲಿಂ ಲೀಗಿಗೆ ಬೇಗ ತಿಳಿದಷ್ಟು ಅವರಿಗೂ ಹಿತಕರ, ದೇಶಕ್ಕೂ ಹಿತಕರ.

# ಹಿಂದೀ ರಾಜಕಾರಣದಲ್ಲಿ ಮತ್ತೆ ಬಿಕ್ಕಟ್ಟು

## ಮುಸ್ಲಿಂ ಲೀಗಿನ ಧೋರಣೆಯಿಂದ ಪ್ರಗತಿಗೆ ಅಡ್ಡಿ

### ಸರದಾರ—ಜಿನ್ನಾ—ಚಿಮಣಲಾಲರ ಅಭಿಪ್ರಾಯ

### ಮಿತ್ರತ್ವದ ಧೋರಣೆ ಅವಶ್ಯ

ಸರದಾರ ವಲ್ಲಭಭಾಯಿ ಪಟೇಲರು ಮುಂಬಯಿಯಲ್ಲಿ ಲೋಕಮಾನ್ಯರ ಪುಣ್ಯತಿಥಿಯ ನಿಮಿತ್ತ ಮಾತಾಡುವಾಗ ಮುಸ್ಲಿಂ ಲೀಗಿನ ಅಧ್ಯಕ್ಷ ಬ್ಯಾ ಜಿನ್ನಾರವರಿಗೆ ಕೆಲ ಹಿತೋಕ್ತಿಗಳನ್ನು ಹೇಳಿದರು «ಜಿನ್ನಾರವರಿಗೆ ಕಾರ್ಯ ಮಾಡಬೇಕೆಂದಿದ್ದರೆ ಮಿತ್ರತ್ವದಿಂದ ಮುಂದೆ ಬರಬೇಕು; ಬೆದರಿಕೆ ಮತ್ತು ಅಪಾದನೆಯ ವಿಚಾರಗಳನ್ನು ಬಿಟ್ಟುಬಿಡಬೇಕು. ನಾವು ಇಚ್ಛಿಸಲಿ ಬಿಡಲಿ ಬ್ರಿಟಿಶರು ಹಿಂದುಸ್ತಾನದಿಂದ ಹೊರಬೀಳಲು ನಿರ್ಧರಿಸಿದ್ದಾರೆ ಏಕೆಂದರೆ ಯಾವದೇ ಪ್ರಸಂಗದಲ್ಲಿ ಅವರಿಲ್ಲಿ ನಿಲ್ಲುವಂತಿಲ್ಲ ಆದುದರಿಂದ ಮುಸಲ್ಮಾನರು ಜಗಳಗಂಟಿತನದ ತಮ್ಮ ಸದ್ಯದ ಧೋರಣವನ್ನು ಬಿಟ್ಟುಗೊಟ್ಟು ಸಹಕಾರದ ವಿಧಾಯಕ ಮಾರ್ಗವನ್ನು ಅನುಸರಿಸುವದು ಹಿತಕರವಾಗಿದೆ. ಮುಸ್ಲಿಂ ಲೀಗಿನ ಕೌನ್ಸಿಲ್ಲಿನಲ್ಲಿ ಈಗ ಧುರೀಣರು ಮಾಡಿದ ಭಾಷಣಗಳನ್ನು ನೋಡಿದರೆ ಒಡಂಬಡಿಕೆ ಮಾಡಿಕೊಳ್ಳಲು ಲೀಗು ನಿಜವಾಗಿ ಇಚ್ಛಿಸುವದಿಲ್ಲೆಂಬುದು ಸ್ಪಷ್ಟವಾಗುತ್ತದೆ' ಎಂದು ಸರದಾರರು ಸಾರಿರುವರು. ಅನಂತರ ಸರದಾರರು ಜಿನ್ನಾರವರ ಕ್ರೋಧದ ಮೂಲವನ್ನು ವಿವರಿಸುತ್ತ ಹೀಗೆ ಹೇಳಿರುವರು. «ಲೀಗಿನ ಪರಾಭವಕ್ಕೆ ನಾನೇ ಕಾರಣನೆಂದೂ ಬ್ರಿಟಿಶ್ ಮಂತ್ರಿತ್ರಯದೊಡನೆ ಕಾಂಗ್ರೆಸ್ ಪರವಾಗಿ ಕೆಲವೊಂದು ಗುಪ್ತ ಒಡಂಬಡಿಕೆ ನಾನು ಮಾಡಿಕೊಂಡಿರುವೆನೆಂದೂ ಜಿನ್ನಾರವರ ಆರೋಪ. ಆದರೆ ಅವರು ಈ ಆರೋಪದ ಸಂಬಂಧದಲ್ಲಿ ಒಂದೂ ಪುರಾವೆಯನ್ನು ಹಾಜರ ಮಾಡಲು ಶಕ್ತರಾಗಲಿಲ್ಲ. ಇದಕ್ಕೆಪ್ರತಿಯಾಗಿ ಜಿನ್ನಾರವರೇ ಗುಪ್ತ ಒಡಂಬಡಿಕೆ ಮಾಡಿಕೊಂಡು ಕಾಂಗ್ರೆಸಿಗೆ ತಿಳಿಯದಂತೆ ಕೆಲವು ಅಶ್ವಾಸನ ಪಡೆದುಕೊಂಡರು. ಆದರೆ ಅವು ಫಲಿಸಲಿಲ್ಲ. ಇದಕ್ಕಾಗಿಯೆ ಅವರೀಗ ರೊಚ್ಚಿಗೆದ್ದಿರುವರು. ಕಾಂಗ್ರೆಸ್ಸು ಏನನ್ನೂ ಬಚ್ಚಿಟ್ಟುಕೊಳ್ಳುವುದಿಲ್ಲ ಎಲ್ಲವನ್ನೂ ಬಹಿರಂಗ ಇಡುವದು. ಕಾಂಗ್ರೆಸ್ಸಿಲ್ಲದ ನಡುಗಾಲ ಸರಕಾರ ರಚಿಸಿಕೊಳ್ಳಲು ಜಿನ್ನಾರ ಇಚ್ಛೆಯಿತ್ತು. ಈ ಪ್ರಯತ್ನ ಸಫಲವಾಗಲಿಲ್ಲ. ಅನೇ ಪರಿಚ್ಛೇದಕ್ಕೆ ಮಾಡಿದ ಅರ್ಥದಲ್ಲಿ ಸುಪ್ರಸಿದ್ಧ ವಕೀಲ ಸರ್ ಸ್ಟಾಫರ್ಡ ಕ್ರಿಪ್ಸ ಮತ್ತು ಜಿನ್ನಾರವರಲ್ಲಿ ಮತೈಕ್ಯವಾಗಲಿಲ್ಲ. ಅದರಲ್ಲಿ ಕಾಂಗ್ರೆಸ್ಸಿನ ತಪ್ಪೇನು? ಅದನ್ನು ದೂಷಿಸುವುದೇಕೆ? ಎಂದು ಸರದಾರರು ಕೇಳಿರುವರು. ಕಾಂಗ್ರೆಸ್ಸು ಮತ್ತು ಮುಸ್ಲಿಂ ಲೀಗಿನ ಗುರಿಗಳು ಭಿನ್ನವಾದ್ದರಿಂದ ಪರಸ್ಪರರ ಸಮ್ಮಿಶ್ರಣವಾಗುವದು ಶಕ್ಯವಿಲ್ಲದಾಗಿದೆ. ಕಾಂಗ್ರೆಸು ಅಖಂಡ ಹಿಂದುಸ್ತಾನದ ಐಕ್ಯಕ್ಕಾಗಿ ಹೋರಾಡುತಿದ್ದರೆ ಮುಸ್ಲಿಂ ಲೀಗು ಪಾಕಿಸ್ತಾನಕ್ಕಾಗಿ ಅಂದರೆ ಹಿಂದುಸ್ತಾನವನ್ನು ವಿಭಜಿಸುವದಕ್ಕಾಗಿ ಪ್ರಯತ್ನಿಸುತಿದೆ.

### ಮುಸ್ಲಿಂಲೀಗು ಹಿಂದೆಗೆದದ್ದೇಕೆ!

ಮುಸ್ಲಿಂಲೀಗು ದೀರ್ಘಾವಧಿ ಯೋಜನೆಯನ್ನು ಮಾನ್ಯ ಮಾಡಿದ್ದನ್ನು ಹಿಂತೆಗೆದುಕೊಳ್ಳಲು ಯಾವ ಪರಿಸ್ಥಿತಿ ಉದ್ಭವವಾಗಿದೆಯೊ ನನಗೆ ತಿಳಿಯದೆಂದು ಸರದಾರರು ಮುಂದೆ ಹೇಳಿರುವರು. ಘಟನಾ ಸಮಿತಿಯಲ್ಲಿ ತನಗೆ ಸರಿದೋರಿದ್ದನ್ನು ಕಾಂಗ್ರೆಸ್ಸು ಮಾಡುವದೆಂದು ಪಂಡಿತ ಜವಾಹರಲಾಲರು ಹೇಳಿದ್ದನ್ನು ಜಿನ್ನಾರವರು ಆಕ್ಷೇಪಿಸಿರುವರು. ಆದರೆ ಬ್ರಿಟಿಶ ಮಂತ್ರಿತ್ರಯದ ಯೋಜನೆ ಮಾನ್ಯಮಾಡುವಾಗ ದಿಲ್ಲಿಯಲ್ಲಿ ಕೌನ್ಸಿಲ್ಲಿನ ಸಭೆಯಲ್ಲಿ ಜಿನ್ನಾರವರೂ ಇದನ್ನೇ ಹೇಳಿದ್ದನ್ನು ಅವರು ಮರೆತಂತೆ ಕಾಣುತ್ತದೆ. ದೀರ್ಘಾವಧಿ ಯೋಜನೆಯಲ್ಲಿ ಪಾಕಿಸ್ತಾನದ ತಳಗಲ್ಲು ಇರುವದರಿಂದ ಲೀಗು ಅದನ್ನು ಮಾನ್ಯ ಮಾಡುತಿದೆಂದೂ ಆ ತಳಗಲ್ಲಿನ ಮೇಲೆ ಸಂಪೂರ್ಣ ಪಾಕಿಸ್ತಾನ ಕಟ್ಟುವದು ಲೀಗಿನ ಆಶಯವಿದೆಂದೂ ಜಿನ್ನಾರವರು ಹೇಳಿದ್ದುಂಟು. ಲೀಗಿನ ಗೊತ್ತುವಳಿಯಲ್ಲಿಯೂ ಇದೇ ಆಶಯದ ಉಲ್ಲೇಖವಿದೆ. ಅಂದಬಳಿಕ ಕಾಂಗ್ರೆಸ ಅಧ್ಯಕ್ಷರ ಹೆಸರಿನಲ್ಲಿ ಶಂಖ ಕುಟ್ಟುವುದೇಕೆಂದು ಸರದಾರರು ಕೇಳಿರುವರು. ಸಂಪೂರ್ಣ ಹಾಗು ಕೂಲಂಕಷ ವಿಚಾರದ ನಂತರ ಮಾನ್ಯ ಮಾಡಿದ್ದನ್ನು ಲೀಗು ಹಿಂತೆಗೆದುಕೊಳ್ಳಲು ಬಯಸುತಿದ್ದರೆ ಅದು ಪೆವ ಹುಡುಕಲು ಹಾಗು ಅದರ ದೂಷಣೆ ಹಾಗು ಜವಾಬದಾರಿಯನ್ನು ಎರಡನೆಯವರ ಮೇಲೆ ಒಗೆಯಲು ಪ್ರಯತ್ನಿಸತಕ್ಕದ್ದಲ್ಲ ಈ ಬಗೆಯ ನಿರ್ಣಯದ ಎಲ್ಲ ಪರಿಣಾಮಗಳಿಗೆ ಅದು ತಾನೇ ತಲೆಗೊಡಬೇಕೆಂದು ಸರದಾರರು ಖಂಡತುಂಡವಾಗಿ ಹೇಳಿರುವರು. ಜಿನ್ನಾರವರು ಜಾತೀಯತೆಯನ್ನು ಬಿಟ್ಟುಗೊಟ್ಟು ರಾಷ್ಟ್ರೀಯತ್ವವನ್ನು ಸ್ವೀಕರಿಸಿದ್ದಾದರೆ ಅವರು ತಮ್ಮ ಮನಸಿಗೆ ಬಂದಂತೆ ಇಡೀ ಮಂತ್ರಿಮಂಡಳ ರಚಿಸಿಕೊಂಡರೂ ಕಾಂಗ್ರೆಸ್ಸು ಅದಕ್ಕೆ ವಿರೋಧಿಸುವುದಿಲ್ಲೆಂದು ಸರದಾರರು ಕೊನೆಯಲ್ಲಿ ಅಶ್ವಾಸಿಸಿರುವರು.

### ಸ್ವಯಂನಿರ್ಣಯ ತತ್ವ

ಮುಸ್ಲಿಂ ಲೀಗಿನ ಧುರೀಣರಾದ ಬ್ಯಾ. ಜಿನ್ನಾರವರು ಸರದಾರರ ಈ ಭಾಷಣವನ್ನು ಟೀಕಿಸುತ್ತ ಅವರು ಮಾಡಿದ ಸಹಕಾರದ ಸೂಚನೆಯನ್ನು ನಿರಾಕರಿಸಿರುವರು. ಪಾಕಿಸ್ತಾನದ ಬೇಡಿಕೆಗೆ ಸ್ವಯಂನಿರ್ಣಯತತ್ವವೇ ತಳಹದಿಯಾದ್ದರಿಂದ ಅದನ್ನು ಪಂಚಾಯತಿಗೆ ಒಪ್ಪಿಸುವುದು ನ್ಯಾಯ್ಯವಾಗದು. ಕಾಂಗ್ರೆಸ್ಸು ದೀರ್ಘಾವಧಿ ಯೋಜನೆಯನ್ನು ನಿಜಾರ್ಥದಲ್ಲಿ ಮಾನ್ಯ ಮಾಡಿಲ್ಲ. ಪ್ರಾಂತಗಳ ಗುಂಪೀಕರಣ ಹಾಗು ಮೂಲಸ್ವರೂಪ ಮತ್ತು ನಡುಗಾಲ ಸರಕಾರದ ರಚನೆ ಕಾಂಗ್ರೆಸ್ಸಿನಿಂದ ಮಾನ್ಯ ಮಾಡಲ್ಪಟ್ಟಿಲ್ಲೆಂಬುದು ಕಾಂಗ್ರೆಸ ಅಧ್ಯಕ್ಷರ ಪತ್ರದಿಂದ ಸ್ಪಷ್ಟವಾಗುತ್ತದೆ. ಕಾಂಗ್ರೆಸ್ಸು ತನ್ನ ಉದ್ದೇಶಸಾಧನಗಾಗಿಯೆ ಘಟನಾ ಸಮಿತಿಯನ್ನು ಸೇರುವದೆಂಬದೂ ಕಾಂಗ್ರೆಸ ಅಧ್ಯಕ್ಷರ ಮಾತಿನಿಂದ ಸ್ಪಷ್ಟವಾಗುವದು. ಲೀಗಿನ ಹಾಗು ಕಾಂಗ್ರೆಸ್ಸಿನ ಗುರಿ ಭಿನ್ನವಾಗಿದ್ದರಿಂದ ಎರಡರಲ್ಲಿ ಸಮ್ಮಿಶ್ರಣವಾಗುವದು ಶಕ್ಯವಿಲ್ಲೆಂದು ಸರದಾರರು ಹೇಳಿದ್ದಕ್ಕೆ ಜಿನ್ನಾರವರು ತಮ್ಮ ಪಾಕಿಸ್ತಾನದ ಬೇಡಿಕೆಯ ಮಹತ್ವವನ್ನು ಹೊಗಳಿಕೊಂಡಿದ್ದಾರೆ. ಪಾಕಿಸ್ತಾನದ ಬೇಡಿಕೆಯಲ್ಲಿ ಹಿಂದೂ ಹಾಗು ಮುಸಲ್ಮಾನ ಎರಡೂ ಪ್ರಮುಖ ಜನಾಂಗಗಳಿಗೆ ಸ್ವಾತಂತ್ರ್ಯದ ಕೊಡುಗೆಯಿದೆ ಆದರೆ ಕಾಂಗ್ರೆಸ್ಸು ಹಾಗು ಪಟೇಲರು ಏಕೀಕೃತ ಹಿಂದುಸ್ತಾನವನ್ನು ಸ್ಥಾಪಿಸಲು ಇಚ್ಛಿಸುತಿರುವರು. ಮತ್ತು ೧೦ ಕೋಟಿ ಮುಸಲ್ಮಾನರನ್ನು ಸವರ್ಣ ಹಿಂದುಗಳ ಆಳಿಕೆಗೆ ಒಳಪಡಿಸಬೇಕೆನ್ನುವರು. ಅಂದಬಳಿಕ ಈ ತಳಹದಿಯ ಮೇಲೆ ಸಮ್ಮಿಶ್ರಣ ಹೇಗೆ ಸಾಧ್ಯವೆಂದು ಜಿನ್ನಾರವರು ಕೇಳಿರುವರು ಹಿಂದುಸ್ತಾನವನ್ನು ಒಡೆದು ಪಾಕಿಸ್ತಾನ ಪ್ರದೇಶದಲ್ಲಿ ಮುಸಲ್ಮಾನರ ವರ್ಚಸ್ಸನ್ನು ಸ್ಥಾಪಿಸಬೇಕೆಂದು ಲೀಗಿನ ಹಂಬಲವಿದ್ದು ಆದರಿಂದ ಹಿಂದುಗಳಿಗೆ ಮತ್ತು ಇತರರಿಗೆ ಅದೆಂತು ಸ್ವಾತಂತ್ರ್ಯ ಸಿಕ್ಕುವುದೊ? ಈ ಸಂಬಂಧದಲ್ಲಿ ಸರ್ ಚಿಮಣಲಾಲ ಸೆಟ್ಲವಾಡರು ಮಾರ್ಮಿಕ ಉತ್ತರ ಕೊಟ್ಟಿದ್ದಾರೆ. ಜಿನ್ನಾರವರು ಈ ದೀರ್ಘ ಸಂದರ್ಶನದ ಕೊನೆಯಲ್ಲಿ ಪಂಚಾಯತಿಯ ವಿಷಯವನ್ನೆತ್ತಿ ಪಾಕಿಸ್ತಾನವು ಸ್ವಯಂನಿರ್ಣಯತತ್ವವನ್ನವಲಂಬಿಸಿದ್ದರಿಂದ ಅದನ್ನು ಪಂಚಾಯತಿಗೆ ಒಪ್ಪಿಸುವದು ನ್ಯಾಯ್ಯವಾಗದು, ಇಷ್ಟೆ ಅಲ್ಲ ವ್ಯವಹಾರ್ಯವೂ ಆಗುವದಿಲ್ಲವೆಂದು ಹೇಳಿ ಪಂಚರನ್ನು ಆರಿಸುವವರು ಯಾರು! ಅವರ ನಿರ್ಣಯವನ್ನು ಹೇರುವವರು ಯಾರು? ಪಂಚಾಯತಿಗೆ ಒಪ್ಪಿಸುವದೇ ಪಟೇಲರ ಇಚ್ಛೆ ಇದ್ದರೆ ಇಡೀ ಘಟನೆಯ ವಿಷಯವನ್ನೇ ಏಕೆ ಒಪ್ಪಿಸಬಾರದು ಎಂದು ಮುಂತಾಗಿ ಮಾತು ಮುಗಿಸಿರುವರು.

### ಸೆಟ್ಲವಾಡರ ಸವಾಲು

ಜಿನ್ನಾರವರ ಈ ಹೇಳಿಕೆಯನ್ನು ಖಂಡಿಸುತ್ತ ಸರ್ ಚಿಮಣಲಾಲ ಸೆಟ್ಲವಾಡರು ಪತ್ರಿಕೆಗಳಿಗೆ ಪ್ರಕಟನೆಯೊಂದನ್ನು ಕೊಟ್ಟಿರುವರು. ಸ್ವಯಂನಿರ್ಣಯ ತತ್ವ ಅಂದರೆ ಯಾರ ಸ್ವಯಂನಿರ್ಣಯ? ಪಂಜಾಬದಲ್ಲಿ ಮುಸಲ್ಮಾನರು ೧೦೦ ಕ್ಕೆ ೫೨ ರಷ್ಟಿದ್ದು ಮುಸಲ್ಮಾನೇತರರು ೪೮ ರಷ್ಟಿರುವರು. ಬಂಗಾಲದಲ್ಲಿ ಮುಸಲ್ಮಾನರು ೫೪ ರಷ್ಟಿದ್ದಾರೆ. ಮುಸಲ್ಮಾನೇತರರು ೪೬ ರಷ್ಟಿರುವರು. ಆಸಾಮದಲ್ಲಿ ಮುಸಲ್ಮಾನೇತರರೇ ಹೆಚ್ಚಿಗಿರುವರು. ಅಲ್ಲಿಯೂ ಕಾಂಗ್ರೆಸ ಮಂತ್ರಿಮಂಡಳವೇ ಇದೆ. ಅನೇಕ ಮುಸಲ್ಮಾನ ಮತದಾರರು ಕಾಂಗ್ರೆಸ್ಸಿಗೇ ಮತಕೊಟ್ಟಿರುವರು. ಸಿಂಧದಲ್ಲಿ ಮುಸಲ್ಮಾನರ ಸಂಖ್ಯೆ ಹೆಚ್ಚಿಗಿದ್ದು ಲೀಗ ಮಂತ್ರಿಮಂಡಳ ಅಲ್ಲಿದ್ದರೂ ಅದೀಗ ತತ್ತರಿಸುತಿದೆ. ಜಿನ್ನಾರವರಂತೆ ಕಲ್ಪಿಸಿದರೆ ಪಂಜಾಬದಲ್ಲಿಯ ೧೦೦ ಕ್ಕೆ ೫೨ ಮುಸಲ್ಮಾನರು ಬಂಗಾಲದಲ್ಲಿಯ ೫೪ ಮುಸಲ್ಮಾನರು ಮತ್ತು ಆಸಾಮದಲ್ಲಿಯ ಅಲ್ಪಸಂಖ್ಯಾಕ ಮುಸಲ್ಮಾನರು ಪಂಜಾಬ ಬಂಗಾಲಗಳಲ್ಲಿ ಸ್ವಲ್ಪೇ ಸಂಖ್ಯೆಯಿಂದ ಕಡಿಮೆ ಇರುವ ಹಾಗು ಆಸಾಮದಲ್ಲಿ ಬಹುಸಂಖ್ಯಾಕರಾಗಿರುವ ಮುಸಲ್ಮಾನೇತರರ ಇಚ್ಛೆಯನ್ನು ಧಿಕ್ಕರಿಸಿ ಪಾಕಿಸ್ತಾನಕ್ಕೆ ಅನುಕೂಲವಾಗಿ ಸ್ವಯಂನಿರ್ಣಯಾಧಿಕಾರವನ್ನು ಉಪಯೋಗಿಸಬೇಕು. ಇದರ ಹೊರತಾಗಿ ಬಂಗಾಲ ಪಂಜಾಬಗಳ ನಡುವೆ ಸಂಯುಕ್ತಪ್ರಾಂತ ಹಾಗು ಬಿಹಾರಗಳಿರುವ ಅಡಚಣೆಯೊಂದಿದೆ. ಒಂದೇ ಧರ್ಮದ ಅಥವಾ ಒಂದೇ ಜನಾಂಗದ ಜನರು ಒತ್ತಟ್ಟಿಗೆ ಇದ್ದಲ್ಲಿ ವಿಲ್ಸನ್‌ರ ಸ್ವಯಂನಿರ್ಣಯ ತತ್ವವನ್ನು ಹಚ್ಚುವದು ಯೋಗ್ಯವಾಗುವದು. ಪಂಜಾಬ, ಬಂಗಾಲ, ಆಸಾಮ, ಗಡಿನಾಡು, ಸಿಂಧ ಮತ್ತು ಬಲುಚಿಸ್ತಾನ ಇವುಗಳಲ್ಲಿಯ ಜನಸಂಖ್ಯೆಯನ್ನು ಕೂಡಿಸಿದರೆ ಮುಸಲ್ಮಾನ ಹಾಗು ಮುಸಲ್ಮಾನೇತರರ ಜನಸಂಖ್ಯೆಯು ಕ್ರಮವಾಗಿ ೧೦೦ ಕ್ಕೆ ೩೦ ರಷ್ಟು ಆಗುವದೆಂದು ತೋರಿಸುವ ಪ್ರಯತ್ನ ಒಂದು ಕಾಲಕ್ಕೆ ನಡೆಯಿತು. ಈ ಕೈಚಳಕದಿಂದ ಪಂಜಾಬದಲ್ಲಿಯ ೧೦೦ಕ್ಕೆ೪೮ ಮುಸಲ್ಮಾನೇತರರು ಬಂಗಾಲದಲ್ಲಿಯ ೪೬ ಮುಸಲ್ಮಾನೇತರರು ೧೦೦ ಕ್ಕೆ ೩೦ಕ್ಕೆ ಇಳಿಯುವರಲ್ಲದೆ ಆಸಾಮದಲ್ಲಿನ ಬಹುಸಂಖ್ಯಾಕ ಮುಸಲ್ಮಾನೇತರರು ಅಲ್ಪಸಂಖ್ಯಾಕರಾಗಿ ಪರಿಣಮಿಸುವರು. ಚಿಮಣಲಾಲರು ಜಿನ್ನಾರವರ ಸ್ವಯಂನಿರ್ಣಯಾಧಿಕಾರ ತತ್ವವನ್ನು ಇಷ್ಟೊಂದು ಸಮಂಜಸ ಮತ್ತು ಮಾರ್ಮಿಕ ರೀತಿಯಿಂದ ಖಂಡಿಸಿಬಿಟ್ಟಿರುವರೆಂಬುದು ಮೇಲಿನ ವಿವೇಚನೆಯಿಂದ ಸ್ಪಷ್ಟವಾಗುವದು. ಪಾಕಿಸ್ತಾನದ ಬಗ್ಗೆ ಅವರು ಈ ರೀತಿ ಹೇಳಿರುವರು. ಹಿಂದುಸ್ತಾನವನ್ನು ಪಾಕಿಸ್ತಾನ ಮತ್ತು ಹಿಂದುಸ್ತಾನವೆಂದು ವಿಭಜಿಸಿದರೆ ಎರಡೂ ಭಾಗಗಳು ದುರ್ಬಲವಾಗುವವು. ಘಟನೆಯಲ್ಲಿ ಮುಸಲ್ಮಾನ ಹಾಗು ಇತರ ಅಲ್ಪಸಂಖ್ಯಾಕರಿಗೆ ಸಂಪೂರ್ಣ ಧಾರ್ಮಿಕ ಸಾಂಸ್ಕೃತಿಕ ಹಾಗು ಆರ್ಥಿಕ ಸಂರಕ್ಷಣೆ ದೊರಕಿಸಿಕೊಳ್ಳುವದೇ ಅಪೇಕ್ಷಣೀಯಬೇಕು. ಯಾವದೊಂದು ಕಾರ್ಯಕ್ರಮವನ್ನಿಟ್ಟುಕೊಂಡು ಪಕ್ಷ ಕಟ್ಟಿಕೊಳ್ಳದೆ ಧರ್ಮದ ಮೇಲೆ ಪಕ್ಷಗಳನ್ನು ಕಟ್ಟಿಕೊಳ್ಳುವದು ದುಷ್ಟವಾಗಿದೆ. ಅಂಥ ಪರಿಸ್ಥಿತಿಯಲ್ಲಿ ಪ್ರಜಾಸತ್ತೆ ಎಂದಿಗೂ ಪ್ರಗತಿ ಹೊಂದದೆಂದು ಚಿಮಣಲಾಲರು ಎಚ್ಚರಿಕೆ ಕೊಟ್ಟಿರುವರು.

### ಕಾಂಗ್ರೆಸ್ಸಿನ ರಾಜ್ಯ ನಡೆಯಗೊಡಲಿಕ್ಕಿಲ್ಲ!

ಮುಸ್ಲಿಂಲೀಗು ಹೋರಾಟದ ನಿರ್ಣಯ ಸ್ವೀಕರಿಸಿದ್ದರೂ ಅದರ ಸ್ವರೂಪವನ್ನು ಇನ್ನೂ ವಿವರಿಸಿರುವದಿಲ್ಲ. ಅದರ ಕ್ರಿಯಾಸಮಿತಿಯು ಎರಡು ತಿಂಗಳುಗಳಲ್ಲಿ ಅದನ್ನು ಗೊತ್ತುಪಡಿಸಿ ಲೀಗ ಕೌನ್ಸಿಲ್ಲಿಗೆ ಒಪ್ಪಿಸುವದೆಂದೂ ಅಲ್ಲಿ ಅದು ಸ್ವೀಕೃತವಾದ ಬಳಿಕ ಜಾರಿಯಲ್ಲಿ ಬರುವದೆಂದೂ ಹೇಳಲಾಗುತ್ತದೆ. ಆದರೆ ಲೀಗ ಧುರೀಣರು ತಮಗೆ ತೋಚಿದಂತೆ ಈಗಾಗಲೆ ಭಾವೀ ಹೋರಾಟದ ರೂಪರೇಷೆಗಳನ್ನು ವಿವರಿಸಹತ್ತಿರುವರು. ಲೀಗ ಕಾರ್ಯದರ್ಶಿಗಳಾದ ಶ್ರೀ ಲಿಯಾಕತ ಅಲ್ಲೀಖಾನರು ಅಮೇರಿಕೆಯ ಅಸೋಸಿಯೇಟಿಡ್ ಪ್ರೆಸ್ಸಿಗೆ ಸಂದರ್ಶನ ಕೊಡುತ್ತ ‹ ಪ್ರತ್ಯಕ್ಷ ಹೋರಾಟವೆಂದರೆ ಕಾಯದೆವಿರುದ್ಧ ಮಾರ್ಗವನ್ನವಲಂಬಿಸುವದು' ಅದು ಯಾವದೇ ಸ್ವರೂಪವನ್ನು ತಾಳಬಹುದು. ಅಯಾ ಪರಿಸ್ಥಿತಿಯನ್ನವಲಂಬಿಸಿ ಅದನ್ನು ಹೆಚ್ಚು ಕಡಿಮೆ ಮಾಡಬಹುದೆಂದು ಹೇಳಿದರು. ನಾವೇನು ಯುದ್ಧವನ್ನು ಹೂಡಿಲ್ಲ ಆದರೆ ೧೦ ಕೋಟಿ ಮುಸಲ್ಮಾನರ ರಕ್ಷಣೆಗಾಗಿ ನಾವು ಬದ್ಧಪ್ರತಿಜ್ಞರಾಗಿರುವೆವೆಂದೂ ಅವರು ನುಡಿದರು. ಕಾಂಗ್ರೆಸ್ಸು ಕೇಂದ್ರದಲ್ಲಿ ಅಧಿಕಾರ ಸ್ವೀಕರಿಸಿದರೆ ಎಲ್ಲ ರೀತಿಯಿಂದ ಅದನ್ನು ವಿರೋಧಿಸಲಾಗುವದು ಘಟನಾಬದ್ಧವಾಗಿ ಇಲ್ಲವೆ ಪ್ರತ್ಯಕ್ಷ ಹೋರಾಟ ಹೂಡಿ ಕಾಂಗ್ರೆಸ್ಸಿನ ಆಡಳಿತವನ್ನು ಅಶಕ್ಯ ಮಾಡಲಾಗುವದು. ಅದೇ ಕಾಲಕ್ಕೆ ಇಂದಿನ ಪರಿಸ್ಥಿತಿಯನ್ನನುಲಕ್ಷಿಸಿ ಹೊಸದಾಗಿ ಎಲ್ಲವನ್ನೂ ಹಿಂದುಸ್ತಾನದ ಸ್ವಾತಂತ್ರ್ಯದ ಇಡೀ ಪ್ರಶ್ನೆಯನ್ನೂ ವಿಚಾರಿಸಲಾಗುವದು. ಘಟನಾ ಸಮಿತಿಯ ಸಂಬಂಧದಲ್ಲಿ ಹೇಳುತ್ತ ಈಗ ಆರಿಸಲ್ಪಟ್ಟ ಲೀಗ ಸದಸ್ಯರು ಸಮಿತಿಯ ಸಭೆಗೆ ಹೋಗುವದಿಲ್ಲ. ರಾಜೀನಾಮೆಯನ್ನು ಕೊಡುವದಿಲ್ಲ ಎಂದು ಹೇಳಿದರು. ಮುಸ್ಲಿಂಲೀಗಿನ ಸಹಕಾರವಿಲ್ಲದೆ ಕಾಂಗ್ರೆಸ್ ಕೇಂದ್ರದಲ್ಲಿ ಅಧಿಕಾರ ಸ್ವೀಕರಿಸುವದೆಂದು ಪತ್ರಿಕೆಗಳಲ್ಲಿ ಬಂದ ಸುದ್ದಿಯಿಂದ ಬೆದರಿದಂತಾಗಿ ಮುಸ್ಲಿಂಲೀಗ ಧುರೀಣರು ಈ ರೀತಿ ಅಭಿಪ್ರಾಯಪಡಹತ್ತಿರುವರು.

### ಸರಕಾರದ ಧೋರಣವೇನು?

ವಾಯಿಸರಾಯ ವೇವೆಲ್ಲರು ನಡುಗಾಲ ಸರಕಾರದ ಸಂಬಂಧದಲ್ಲಿ ಕಾಂಗ್ರೆಸ್ ಲೀಗು ಮೊದಲಾದ ಪಕ್ಷಗಳ ಧುರೀಣರೊಡನೆ ಇನ್ನೂ ಮಾತುಕತೆ ನಡೆಸಿಲ್ಲೆಂದು ತಿಳಿಯುತ್ತದೆ. ಮುಸ್ಲಿಂ ಲೀಗು ದೀರ್ಘಾವಧಿ ಯೋಜನೆಯನ್ನು ನಿರಾಕರಿಸಿಬಿಟ್ಟದ್ದರಿಂದ ವಾಯಿಸರಾಯರು ಎಲ್ಲವನ್ನು ಮೊದಲಿನಿಂದಲೇ ವಿಚಾರ ಮಾಡಬೇಕಾಗಿದೆಯಂತೆ. ಘಟನಾ ಸಮಿತಿಯ ಭವಿತವ್ಯವೆಲ್ಲ ವಾಯಿಸರಾಯರ ಭಾವೀ ಧೋರಣವನ್ನೇ ಅವಲಂಬಿಸಿದೆಂದು ಹೇಳಬಹುದು. ವಾಯಿಸರಾಯ-ನೆಹರೂರವರಲ್ಲಿ ನಡೆದ ಮಾತುಕತೆಗಳ ಬಗ್ಗೆ ಕಾಂಗ್ರೆಸ್ ಕಾರ್ಯ ಸಮಿತಿಯ ಸಭೆಯಲ್ಲಿ ಚರ್ಚೆಯಾಗಿ ವಾಯಿಸರಾಯರಿಗೆ ಕಾಂಗ್ರೆಸ್ಸಿನ ನಿರ್ಣಯವನ್ನು ತಿಳಿಸಿದ ಬಳಿಕ ಅವರು ಮುಂದಿನ ಧೋರಣೆ ಸ್ವೀಕರಿಸುವರೆಂದು ತಿಳಿಯುತ್ತದೆ. ಆದುದರಿಂದ ಘಟನಾ ಸಮಿತಿಯ ಸಭೆ ಮುಂದೂಡಲ್ಪಡುವ ಸಂಭವವಿದೆಂದು ತೋರುತ್ತದೆ. ಆದರೂ ಘಟನಾ ಸಮಿತಿಗೆ ಸಂಬಂಧಿಸಿದ ಯೋಜನೆಯನ್ನು ಸರಕಾರ ಬಿಟ್ಟುಗೊಡುವದಿಲ್ಲೆಂದು ಗೊತ್ತಾಗುತ್ತದೆ. ಘಟನಾ ಸಮಿತಿಯ ವೆಚ್ಚಕ್ಕಾಗಿ ೫೦ ಲಕ್ಷ ರೂ. ಗಳನ್ನು ಹಣಕಾಸಿನ ಸ್ಥಾಯಿ ಸಮಿತಿಯು ಮಂಜೂರ ಮಾಡಿದೆ. ಇದರಲ್ಲಿ ಸದಸ್ಯರ ಪ್ರವಾಸ ಹಾಗು ದೈನಿಕ ಭತ್ತೆಗಾಗಿ ೩೫ ಲಕ್ಷ ರೂಪಾಯಿಗಳನ್ನು ಘಟನಾ ಸಮಿತಿಯ ಶಿಬ್ಬಂದಿಯ ಸಂಬಳಕ್ಕಾಗಿ ೧೨ ಲಕ್ಷ ರೂಪಾಯಿಗಳನ್ನು ಸಮಿತಿಯ ಅಧಿವೇಶನ ಜರಗುವ ಭವನದ ಪುಸ್ತಕ ಭಂಡಾರವನ್ನು ಬೆಳೆಸುವದಕ್ಕಾಗಿ ೩ ಲಕ್ಷ ರೂಪಾಯಿಗಳನ್ನು ವಿನಿಯೋಗಿಸಲಾಗುವವೆಂದು ತಿಳಿಯುತ್ತದೆ. ಈ ರೀತಿಯಾಗಿ ನಡುಗಾಲ ಸರಕಾರದ ಯೋಜನೆ ಮತ್ತು ಘಟನಾ ಸಮಿತಿ ಎಂದು ಕಾರ್ಯರೂಪದಲ್ಲಿ ಬರುವವೋ ತಿಳಿಯದಂತಾಗಿದೆ. ಅಲ್ಲಿಯವರೆಗೆ ಹಿಂದುಸ್ತಾನದಲ್ಲಿ ಅಧಿಕಾರಿಗಳ ಆಡಳಿತವೇ ನಡೆಯತಕ್ಕದ್ದು.

---

ಗುಲಬುರ್ಗಾದಲ್ಲಿ ಸತ್ಯಾಗ್ರಹ ಹೂಡಿದ ಹೈದ್ರಾಬಾದ ಸಂಸ್ಥಾನ ಹಿಂದೂ ಮಹಾಸಭೆಯ ೧೧ ಸತ್ಯಾಗ್ರಹಿಗಳು ಬಂಧಿಸಲ್ಪಟ್ಟಿರುವರು. ನಾಗರಿಕ ಸ್ವಾತಂತ್ರ್ಯ ಹಾಗು ಜವಾಬದಾರಿ ಸರಕಾರದ ಸ್ಥಾಪನೆಯ ಬಗ್ಗೆ ಸಭೆಯ ಕಾರ್ಯಕಾರೀ ಮಂಡಳದವರು ಮಾಡಿದ ನಿರ್ಣಯಕ್ಕನುಸಾರವಾಗಿ ಈ ಸತ್ಯಾಗ್ರಹ ಪ್ರಾರಂಭವಾಗಿದೆ. ಪುರಾತನ ಕಾಲದಿಂದ ಇದ್ದ ಒಂದು ಗುಡಿಯ ಮೇಲೆ ಕಳಸವಿಡಲು ಪ್ರಯತ್ನಿಸಿದ್ದಕ್ಕಾಗಿ ಇವರ ಬಂಧನವಾಗಿದೆ.



### ಶಾಂತಿ ಪರಿಷತ್ತಿನಲ್ಲಿ ತಿಕ್ಕಾಟ

ಪ್ಯಾರೀಸಿನಲ್ಲಿ ಕಳೆದ ತಿಂಗಳ ಅಂತ್ಯಕ್ಕೆ ಪ್ರಾರಂಭವಾದ ಶಾಂತಿ ಪರಿಷತ್ತು ದೀರ್ಘಕಾಲದ ವರೆಗೆ ಎಳೆಯುವ ಸಂಭವ ತೋರುತಿದೆ. ಕಳೆದ ವಾರದಲ್ಲಿ ಸೂಚಿಸಿದಂತೆ ಚಿಕ್ಕ ರಾಷ್ಟ್ರಗಳಿಗೂ ದೊಡ್ಡವುಗಳಿಗೂ ತಿಕ್ಕಾಟ ನಡೆದಿದೆ. ಮೊಟ್ಟಮೊದಲಿನ ತೊಡಕು ಪರಿಷತ್ತಿನ ವಿಧಿನಿಯಮಗಳ ನಿರ್ಣಯದ ವಿಷಯಕ್ಕೇ ಉಪಸ್ಥಿತವಾಗಿದೆ. ಚತುರ್ರಾಷ್ಟ್ರ ವಿದೇಶ ಮಂತ್ರಿಗಳು ಪರಿಷತ್ತಿನಲ್ಲಿ ಎಲ್ಲ ಮಹತ್ವದ ಪ್ರಶ್ನೆಗಳು ಎರಡು ಮೂರಾಂಶ ಬಹುಮತದಿಂದ ನಿರ್ಣಯಿಸಲ್ಪಡಬೇಕೆಂದು ಸೂಚಿಸಿದ್ದರು. ಆದರೆ ಚಿಕ್ಕ ರಾಷ್ಟ್ರಗಳ ವತಿಯಿಂದ ಅಸ್ಟ್ರೇಲಿಯಾದ ಡಾ. ಇವಾಟರ ಮುಂದಾಳ್ತನದಲ್ಲಿ ಹಾಲಂಡ್, ಬೆಲ್ಜಿಯಂ ಮೊದಲಾದ ಹಲವು ರಾಷ್ಟ್ರಗಳು ಈ ಸೂಚನೆಯನ್ನು ವಿರೋಧಿಸಿವೆ. ಸಾಧಾರಣ ಬಹುಮತದಿಂದಲೇ ಪ್ರಶ್ನೆಗಳ ನಿರ್ಣಯವಾಗಬೇಕು. ಎರಡು ಮೂರಾಂಶ ಬಹುಮತದ ನಿಯಮವನ್ನಿಟ್ಟುಕೊಂಡರೆ ಯಾವುದೊಂದು ಪ್ರಶ್ನೆಯೂ ಬಗೆಹರಿಯಲಾರದೆಂದು ಅವುಗಳ ವಾದ. ಇದಲ್ಲದೆ ಚಿಕ್ಕ ರಾಷ್ಟ್ರಗಳ ಹಿತಕ್ಕೂ ಈ ನಿಯಮ ಧಕ್ಕೆ ತರುವದೆಂದು ಅವು ಸಾಧಿಸುತ್ತವೆ. ಪರಿಷತ್ತು ಪ್ರಾರಂಭವಾದಂದಿನಿಂದೀಚೆಗೆ ಚತುರ್ರಾಷ್ಟ್ರಗಳ ಸಾಲಿಗೆ ಸೇರಿದ್ದರೂ ಈ ವಿಷಯದಲ್ಲಿ ಬ್ರಿಟನ್-ಅಮೇರಿಕೆಗಳು ತಮ್ಮ ಮೂಲ ನಿಲುಮೆಯನ್ನು ಬದಲಿಸಿವೆ. ಸಾಮಾನ್ಯ ಬಹುಮತವನ್ನೇ ಬಹುಸಂಖ್ಯಾಕ ರಾಷ್ಟ್ರಗಳು ಅಪೇಕ್ಷಿಸಿದರೆ ಅದಕ್ಕೆ ತಾವು ಎದುರಾಡುವದಿಲ್ಲವೆಂದು ಅಮೇರಿಕನ್ ವಿದೇಶಮಂತ್ರಿ ಬರ್ನ್ಸರು ಸಾರಿದರು. ಚಿಕ್ಕ ರಾಷ್ಟ್ರಗಳ ನಕ್ಷತ್ರಮಾಲಿಕೆಯನ್ನು ಕಟ್ಟಿಕೊಂಡ ಬ್ರಿಟಿಶ್ ಚಂದ್ರನಾದರೂ ವಿದೇಶ ಮಂತ್ರಿ ಪರಿಷತ್ತಿನಲ್ಲಿ ತಾನು ಸಮ್ಮತಿಸಿದ ಎರಡು-ಮೂರಾಂಶ ಬಹುಮತದ ನಿಯಮ ಅಂಗೀಕೃತವಾಗಬೇಕೆಂದು ಅಷ್ಟು ಆತುರ ಪಡುತ್ತಿಲ್ಲ. ಹೀಗೆ ಮೂಲ ಸೂಚನೆಯ ಬೆಂಬಲಕ್ಕೆ ನಿಂತ ಪ್ರಬಲ ರಾಷ್ಟ್ರಗಳೆಂದರೆ ಸೋವಿಯೆಟ್ ಯೂನಿಯನ್ ಮತ್ತು ಫ್ರಾನ್ಸ ಮಾತ್ರ. ಅಂಗ್ಲೋ ಸ್ಯಾಕ್ಸನ್ನರು ಈ ವಿಷಯದಲ್ಲಿ ತಳೆದ ಧೋರಣದಿಂದ ಸೋವಿಯಟ್ಟರ ಸಂದೇಹಗಳು ಇನ್ನಷ್ಟು ಬಲಗೊಂಡು ಅವರು ಎರಡು-ಮೂರಾಂಶದ ನಿಯಮಕ್ಕೆ ಉಡದಂತೆ ಅಂಟಿಕೊಳ್ಳುವಹಾಗೆ ಮಾಡಿವೆ. ಸಾಮಾನ್ಯ ಬಹುಮತದ ನಿಯಮವನ್ನೆ ಅನುಸರಿಸುವದು ಅಂಗ್ಲೋ ಸ್ಯಾಕ್ಸನ್ ರಾಷ್ಟ್ರಗಳಿಗೆ ಹಿತಕರವಾಗಿದ್ದರೆ ಸೋವಿಯಟ್ಟರಿಗೆ ಉಪದ್ರವಕಾರಿಯಾಗಿದೆಯೆಂದು ರಶಿಯನ್ ವಿದೇಶ ಮಂತ್ರಿ ಮೊಲಟೊವರು ಸ್ಪಷ್ಟವಾಗಿ ಹೇಳಿದರು. ನಿಯಮಾವಲಿಯನ್ನು ಸಿದ್ಧಗೊಳಿಸಲು ನಿಯಮಿಸಲ್ಪಟ್ಟ ನಿಯಮಸಮಿತಿಯಲ್ಲಿಯೇ ಈ ಬಗ್ಗೆ ಹೋರಾಟ ಮುಗಿದಿಲ್ಲ. ಸೋವಿಯೆಟ್ ವಾದವೂ ಈ ವಿಷಯದಲ್ಲಿ ಬಲಿಷ್ಠವಾಗಿದೆ. ಯುದ್ಧದಲ್ಲಿ ಕಷ್ಟ ನಿಷ್ಠುರಗಳಿಗೆ ಗುರಿಯಾದವುಗಳು ೯ ರಾಷ್ಟ್ರಗಳು. ಸಾಮಾನ್ಯ ಬಹುಮತದ ನಿಯಮವನ್ನು ಒಪ್ಪಿದರೆ ಈಗ ಶಾಂತಿ ಪರಿಷತ್ತಿನಲ್ಲಿ ಕೂಡಿರುವ ೨೧ ರಾಷ್ಟ್ರಗಳಲ್ಲಿ ಯುದ್ಧದಿಂದ ಅಷ್ಟು ಅನಾಹುತಕ್ಕೊಳಗಾಗದ ೧೨ ರಾಷ್ಟ್ರಗಳು ಸೇರಿ ಕಷ್ಟಪಟ್ಟ ೯ ರಾಷ್ಟ್ರಗಳನ್ನು ಸೋಲಿಸಬಲ್ಲವು. ಇದು ಅನ್ಯಾಯ, ಎಂದು ಸೋವಿಯೆಟ್ ಮತ. ನಿಯಮ ಸಮಿತಿಯಲ್ಲಿ ವಿದೇಶ ಮಂತ್ರಿ ಬರ್ನ್ಸರಿಗೂ ವಿದೇಶ ಮಂತ್ರಿ ಮೊಲಟೋವರಿಗೂ ತೀಕ್ಷ್ಣವಾಗ್ಯುದ್ಧ ಅಹ್ವಾನ ಪ್ರತ್ಯಾಹ್ವಾನಗಳು ನಡೆದವು. "ಮೊಲಟೊವರ ಭಾಷಣ ಅಮೇರಿಕನ್ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ನನ್ನ ಭಾಷಣವನ್ನು ರಶಿಯನ್ ಪತ್ರಿಕೆಗಳಲ್ಲಿ ಪ್ರಕಟಿಸುವರೆ?" ಎಂದರು ಬರ್ನ್ಸರು. ಮೊಲಟೋವರು ಈ ಆಹ್ವಾನವನ್ನು ಸ್ವೀಕರಿಸಿಯೆ ಬಿಟ್ಟು ಅಂಗ್ಲೋ-ಅಮೇರಿಕನ್ ಪತ್ರಿಕಾಸ್ವಾತಂತ್ರ್ಯದ ಒಣ ಜಂಬವನ್ನು ಉದ್ಘಾಟಿಸುತ್ತ ಅವರ ಪತ್ರಿಕೆಗಳು ಶ್ರೀಮಂತರ ಕೈಗೂಸುಗಳಾಗಿವೆಯೆಂದು ನುಡಿದರು. ಹೀಗೆ ಬಿಗಿಯಾದ ಪರಿಸ್ಥಿತಿಯೊದಗಿದಾಗ ಅಧ್ಯಕ್ಷರು ಸಭೆ ವಾ... ತಲೆ ತಣ್ಣಗೆ ಮಾಡಿಕೊಳ್ಳುವ ಸಲುವಾ...ಸಬೇಕಾಯಿತು. ಯುಗೋಸ್ಲಾವ ಪ್ರತಿನಿಧಿಗಳು ಎಲ್ಲರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ ಎರಡು-ಮೂರಾಂಶ ಬಹುಮತದಿಂದ ಪಾಸಾಗದಿದ್ದ ನಿರ್ಣಯಗಳನ್ನು ತಾವು ಒಪ್ಪುವದಿಲ್ಲ, ಅವು ತಮಗೆ ಬಂಧಕವಾಗಲಾರವು, ಎಂದು ಸಾರಿಬಿಟ್ಟಿದ್ದಾರೆ. ಸೋವಿಯೆಟ್ ಪ್ರತಿನಿಧಿಗಳು ನಿಯಮ ಸಮಿತಿಯಲ್ಲಿ ಕೂಡ ಈ ವಿಷಯನ ನಿರ್ಣಯ ಎರಡು-ಮೂರಾಂಶ ಬಹುಮತದಿಂದ ಆಗಬೇಕೆಂದು ಛಲ ತೊಟ್ಟಿದ್ದಾರೆ.

# ಅಂತರ್‌ರಾಷ್ಟ್ರೀಯ

### ಪಾಲಿಸ್ತಾನದ ವಿಭಜನೆ

ಬ್ರಿಟಿಶ ಮಂತ್ರಿ ಹರ್ಬರ್ಟ ಮಾರಿಸನ್ನರು ಕಳೆದ ವಾರ ಪಾರ್ಲಮೆಂಟಿನ ಮುಂದೆ ಪಾಲಿಸ್ತಾನ ಸಮಸ್ಯೆಯನ್ನು ಬಗೆಹರಿಸಲು ಅದನ್ನು ನಾಲ್ಕು ಪಾಲು ಮಾಡುವ ಯೋಜನೆಯೊಂದನ್ನು ಮಂಡಿಸಿದರು. ಈ ಯೋಜನೆಯನ್ನು ಅಂಗ್ಲೋ-ಅಮೇರಿಕನ್ ತಜ್ಞ ಸಮಿತಿಯ ಸಲಹೆಗಳನ್ನನುಸರಿಸಿ ಸಿದ್ಧಗೊಳಿಸಲಾಗಿದೆ. ಇದರ ಆಧಾರದ ಮೇಲೆ ಅರಬರಾಷ್ಟ್ರಗಳ ಪರಿಷತ್ತು ಕರೆಯಲಾಗುವದು.

ಯಹೂದ್ಯ ಪ್ರಾಂತದಲ್ಲಿ ಈಗಾಗಲೆ ಯಹೂದ್ಯರು ವಸತಿ ಮಾಡಿರುವ ದೊಡ್ಡ ಭೂಪ್ರದೇಶವಲ್ಲದೆ ಇನ್ನೂ ಕೆಲ ಪ್ರದೇಶಗಳನ್ನು ಹೊಸತಾಗಿ ಸೇರಿಸಿಕೊಡಲಾಗುವದು.

ಜರುಸಲೇಮ ಜಿಲ್ಲೆಯಲ್ಲಿ ಜರುಸಲೇಮ ಮತ್ತು ಬ್ಲಾಡೆಮ ನಗರಗಳೂ ಅವುಗಳ ಸುತ್ತಮುತ್ತಲ ಪ್ರದೇಶವೂ ಸೇರುತ್ತದೆ. ನಾಗೇಬ ಜಿಲ್ಲೆಗೆ ದಕ್ಷಿಣ ಪಾಲಿಸ್ತಾನದಲ್ಲಿ ಇನ್ನೂ ವ್ಯವಸಾಯಕ್ಕೊಳಗಾಗದ ಭಾಗ ಸೇರುತ್ತದೆ.

ಉಳಿದ ಭಾಗವೆಲ್ಲ ಸಂಪೂರ್ಣ ಅರಬರಿಗೆ ಮೀಸಲಾಗಿ ಉಳಿಯುವದು.

ಪ್ರಾಂತಗಳಿಗೆ ಸ್ವಾಯತ್ತತೆ ದೊರೆಯುವದು. ಆದರೆ ಸಂರಕ್ಷಣೆ ವಿದೇಶ ಸುಂಕ ಮಾರ್ಗ ಮೊದಲಾದ ಸೌಕರ್ಯ, ಮತ್ತು ಪ್ರಾರಂಭ ಸ್ಥಿತಿಯಲ್ಲಿ ಕಾಯಿದೆ ಮತ್ತು ವ್ಯವಸ್ಥೆ ಜರುಸಲೇಮಿನಲ್ಲಿರುವ ಕೇಂದ್ರ ಸರಕಾರಕ್ಕೆ ಸೇರುತ್ತವೆ.

ಪ್ರಾಂತಗಳಲ್ಲಿ ಲೋಕನಿಯುಕ್ತವಾದ ಶಾಸನ ಸಭೆಗಳಿರುವವು. ಅವುಗಳ ಸದಸ್ಯರಿಂದ ಆರಿಸಿದ ಮಂತ್ರಿಮಂಡಲಗಳನ್ನು ಪಾಲಿಸ್ತಾನ ಹಾಯ ಕಮೀಶನರರು ನೇಮಿಸುವರು. ಶಾಸನ ಸಭೆಗಳು ಪಾಸುಮಾಡಿದ ಮಸೂದೆಗಳಿಗೆ ಹಾಯ ಕಮೀಶನರರ ಒಪ್ಪಿಗೆ ಬೇಕು.

ಅರಬರು ತಮ್ಮ ಪ್ರಾಂತದಲ್ಲಿ ಯಹೂದ್ಯರು ಬಂದು ನೆಲಸದಂತೆ ಕಾಯಿದೆ ಮಾಡಬಹುದು. ಯಹೂದ್ಯರು ತಮ್ಮ ಪ್ರಾಂತದಲ್ಲಿ ಬೇಕಾದಷ್ಟು ಯಹೂದ್ಯರನ್ನು ತಂದು ನೆಲೆಗೊಳಿಸಬಹುದು. ಇದರಿಂದ ಒಂದು ಲಕ್ಷ ಆಶ್ರಯಹೀನ ಯುರೋಪಿಯನ್ ಯಹೂದ್ಯರನ್ನು ೧೨ ತಿಂಗಳೊಳಗೆ ಪಾಲಿಸ್ತಾನದಲ್ಲಿ ನೆಲೆಗೊಳಿಸಲು ಏನೂ ಆತಂಕವಿಲ್ಲೆಂದು ಬ್ರಿಟಿಶ ಸರಕಾರದ ಅಭಿಪ್ರಾಯ. ಅವರನ್ನು ತಂದು ನೆಲೆಗೊಳಿಸುವ ವೆಚ್ಚವನ್ನು ಅಮೇರಿಕೆ ವಹಿಸಬೇಕು.

### ಕಿಡಿಗೇಡಿ ಯೋಜನೆ

ಪಾಲಿಸ್ತಾನ ವಿಭಜನೆಯ ಈ ಯೋಜನೆಯಲ್ಲಿ ಗಹನವಾದ ಕಿಡಿಗೇಡಿತನ ಅಡಕವಾಗಿದೆ. ಯಹೂದ್ಯರು ಈಗಾಗಲೆ ಪಾಲಿಸ್ತಾನದಲ್ಲಿ ನೂರಕ್ಕೆ ನಲುವತ್ತರಷ್ಟು ಇರಬಹುದು. ಈಗ ಹೊಸದಾಗಿ ಒಂದು ಲಕ್ಷ ಜನರನ್ನು ನೆಲೆಗೊಳಿಸಿದರೆ ೧೦೦೦ ವರ್ಷದಿಂದ ಅರಬರ ನಾಡಾಗಿರುವ ಪಾಲಿಸ್ತಾನವನ್ನು ಇಪ್ಪತ್ತೈದು ವರ್ಷಗಳೊಳಗೆ ಯಹೂದ್ಯಬಹುಸಂಖ್ಯಾಕವಾಗಿ ಮಾಡಿ ಅರಬರಿಗೆ ಅನ್ಯಾಯ ಮಾಡಿದಂತಾಗುವದು. ಇಂಥ ಪ್ರಸಂಗದಲ್ಲಿ ಉಭಯತರೊಳಗೆ ಸೌಹಾರ್ದ ನೆಲೆಗೊಳ್ಳುವದು ಸದ್ಯಕ್ಕಂತೂ ಸಾಧ್ಯವಿಲ್ಲ. ಹೀಗಿರುವಾಗ ಶಾಂತಿ ರಕ್ಷಣೆಯ ಹೆಸರಲ್ಲಿ ಬ್ರಿಟಿಶರು ಅನಿರ್ದಿಷ್ಟ ಅವಧಿಯವರೆಗೆ ಅಲ್ಲಿ ಉಳಿಯಬೇಕಾಗುವದು. ಪಾಲಿಸ್ತಾನದ ಸ್ವಾತಂತ್ರ್ಯದ ಪ್ರಶ್ನೆ ಇದರಿಂದ ಸರ್ವಥಾ ಮೂಲೆಗುಂಪಾದಂತಾಯಿತು. ಪಾಲಿಸ್ತಾನದ ಕೇಂದ್ರ ಸರಕಾರವನ್ನು, ಹಿಂದುಸ್ತಾನದ ವಾಯಿಸರಾಯರಂತೆ, ನಾಮಕರಣ ಹೊಂದಿದ ಕಾರ್ಯಕಾರಿ ಸಮಿತಿಯ ಸಹಾಯದಿಂದ ಬ್ರಿಟಿಶ ಹಾಯ ಕಮೀಶನರನು ಆಳುವನು. ಅವನೇ "ಕೇಂದ್ರ ಸರಕಾರ", ಅವನ ಅಧಿಕಾರಕ್ಕೆ ಮಿತಿಯಿಲ್ಲ. ಪಾಲಿಸ್ತಾನವನ್ನು ಭದ್ರವಾದ ಬ್ರಿಟಿಶ ನೆಲೆಯಾಗಿ ಮಾಡುವದೇ ಈ ಯೋಜನೆಯ ಉದ್ದೇಶ.

### ಫಲಕಾರಿಯಾಗುವದಿಲ್ಲ

ಈ ಯೋಜನೆಯ ತಳಹದಿಯ ಮೇಲೆ ಮಾತುಕತೆಗಳನ್ನು ನಡೆಸಲು ಅರಬ ರಾಷ್ಟ್ರಗಳಿಗೆ ಈಗಾಗಲೇ ದುಂಡು ಮೇಜಿನ ಪರಿಷತ್ತಿಗಾಗಿ ಆಮಂತ್ರಣಗಳು ಹೋಗಿವೆ. ಸೌದಿ ಅರೇಬಿಯಾ ಅದನ್ನು ಸ್ವೀಕರಿಸಿದೆ; ಸಿರಿಯಾ, ಲೆಬನಾನ, ಟ್ರಾನ್ಸಜಾರ್ಡನುಗಳೂ ಕೆಲವೊಂದು ಕರಾರು ಹಾಕಿ ಸ್ವೀಕರಿಸಿವೆ. ಯಹೂದ್ಯರೊಡನೆ ಒಂದೇ ಕೂಟದಲ್ಲಿ ಕೂಡಲು ಇವು ಮೂರೂ ಒಪ್ಪಿಲ್ಲ. ಆದರೆ ಈ ಯೋಜನೆಯನ್ನು ಅರಬರು ಸಂಪೂರ್ಣವಾಗಿ ತಿರಸ್ಕರಿಸಿದ್ದಾರೆ. ವಿಚಿತ್ರ, ಆದರೂ ನಿಜ, ಯಹೂದ್ಯ ಸಮಿತಿಯೂ ಇದನ್ನು ತಿರಸ್ಕರಿಸಿದೆ. ಪಾಲಿಸ್ತಾನವನ್ನು ಪೂರ್ಣ ಯಹೂದ್ಯ ನಾಡಬೇಕೆಂದು ಅದರ ಹೇಳಿಕೆ. ಇದಲ್ಲದೆ ಈ ಯೋಜನೆಯನ್ನು ಸಿದ್ಧಗೊಳಿಸುವಲ್ಲಿ ಅಮೇರಿಕನ್ ತಜ್ಞರು ಭಾಗವಹಿಸಿದ್ದರೂ ಅಮೇರಿಕನ್ ಅಧ್ಯಕ್ಷ ಟ್ರೂಮನ್ನರು ಅಮೇರಿಕನ್ ಯಹೂದ್ಯರ ಒತ್ತಾಯಕ್ಕೊಳಗಾಗಿ ಅದನ್ನು ತಿರಸ್ಕರಿಸಿದ್ದಾರೆ. ಈ ಪ್ರಕಾರ ಮೂರು ಪ್ರಮುಖ ಪಕ್ಷಗಳು ಯೋಜನೆಯನ್ನು ತಿರಸ್ಕರಿಸಿರಲು ಬ್ರಿಟಿಶರು ಅದನ್ನು ಹೇಗೆ ಮುಂದೊತ್ತುವರು? ಪರಿಷತ್ತು ಹೇಗೆ ಕೂಡಿಸುವರು? ಈ ಕಾರಣಗಳಿಂದ ಸದ್ಯದ ಸ್ವರೂಪದಲ್ಲಿ ಯೋಜನೆ ಆಚರಣೆಗೆ ಬರುವ ಸಂಭವ ಕಾಣಿಸುವದಿಲ್ಲ. ಯಹೂದ್ಯರಿಗಾಗಿ ಪಾಲಿಸ್ತಾನವನ್ನು ತೆರೆದಿಡುವದಕ್ಕಾಗಿ ಕಂಠಶೋಷಣೆ ಮಾಡಿಕೊಳ್ಳಲು ಮುಂದಾಗಿರುವ ಅಮೇರಿಕೆ ಈ ಪ್ರಶ್ನೆಯನ್ನು ಬಗೆಹರಿಸುವದರಲ್ಲಿ ನೇರವಾಗಿ ಪ್ರವೇಶಿಸಿ ಹೊಣೆಹೊರಲು ಸಿದ್ಧವಾಗಿಲ್ಲ.

### ಯುಕ್ತರಾಷ್ಟ್ರಗಳು ಮತ್ತು ದ. ಆಫ್ರಿಕೆ

ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರನ್ನು ಅಲ್ಲಿಯ ಬಿಳಿ ಸರಕಾರ ಪೀಡಿಸುತಿರುವ ದೂರು ಯುಕ್ತರಾಷ್ಟ್ರಸಂಸ್ಥೆಯ ಮುಂದೆ ಮಂಡಿಸಲ್ಪಟ್ಟಿದೆಯಷ್ಟೆ. ಈ ವಿಷಯದಲ್ಲಿ ಅಮೇರಿಕನ್ ಜನಾಭಿಪ್ರಾಯವನ್ನು ಒಲಿಸಲು ಶ್ರೀ. ಅಶ್ವಿನೀಕುಮಾರ ಚೌಧರಿ ಮೊದಲಾದ ಹಿಂದೀ ಪ್ರಮುಖರು ಪ್ರಯತ್ನಗಳನ್ನು ನಡೆಸಿದ್ದಾರೆ. ಆದರೆ ಬಿಳಿಯರ ಪ್ರಭಾವಕ್ಕೆ ಒಳಗಾದ ಯುಕ್ತರಾಷ್ಟ್ರಗಳು ಪ್ರಭಾವಶಾಲಿ ಸ್ಮಟ್ಸರ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಯುಕ್ತರಾಷ್ಟ್ರ ಸನದಿನ ಈ ನಿಚ್ಚಳವಾದ ಉಲ್ಲಂಘನೆಯನ್ನು ವಿಚಾರಿಸಲು ನಾಚುತಿರುವ ಲಕ್ಷಣ ತೋರತೊಡಗಿದೆ. ನಾಳೆ ಸಪ್ಟಂಬರಕ್ಕೆ ಕೂಡುವ ಯುಕ್ತರಾಷ್ಟ್ರಾಧಿವೇಶನದ ವೇಳಾಪತ್ರಿಕೆಯಲ್ಲಿ ದಕ್ಷಿಣ ಆಫ್ರಿಕೆಯ ಪ್ರಶ್ನೆಯನ್ನು ಕಟ್ಟಕಡೆಯ ವಿಷಯವಾಗಿ ಮಾಡಲಾಗಿದೆಯೆಂದು ವಾರ್ತೆ ಬಂದಿದೆ. ಈ ವಿಷಯದಲ್ಲಿ ಬಿಳಿಯರ ಧೋರಣೆಯನ್ನು ಸಮರ್ಥಿಸಿಕೊಳ್ಳಲು ಸ್ವಯಂ ಸ್ಮಟ್ಸರೇ ಹಾಜರಾಗುವರಂತೆ. ಅಂದಮೇಲೆ ಇಕ್ಕಟ್ಟಿನಿಂದ ನುಣುಚಿಕೊಳ್ಳಲು ಈ ಪ್ರಶ್ನೆಯ ವಿಚಾರ ಮುಂದೆಬಿದ್ದರೂ ಬೀಳಬಹುದು. ಆದರೆ ಇದರ ಬಗ್ಗೆ ಯಾವುದೇ ಕ್ರಮ ಕೈಕೊಳ್ಳಲು ಯುಕ್ತರಾಷ್ಟ್ರ ಸಂಸ್ಥೆ ತಪ್ಪಿದರೆ ಅದು ತನ್ನ ತಲೆಯ ಮೇಲೆ ತಾನೇ ಕಲ್ಲುಹಾಕಿಕೊಂಡಂತಾಗದಿರದು.

### ಬಸರಾಕ್ಕೆ ಹಿಂದೀ ಸೈನಿಕರು

ಹಿಂದುಸ್ತಾನ ಸರಕಾರದ ಹೇಳಿಕೆಯೊಂದು ಮೊನ್ನೆ ಮೊನ್ನೆ ಹಿಂದೀ ಸೈನಿಕರನ್ನು ಇರಾಕದಲ್ಲಿರುವ ಬ್ರಿಟಿಶ ನೆಲೆಯಾದ ಬಸರಾಕ್ಕೆ ಕಳಿಸಿದುವದಾಗಿ ಸಾರಿದ್ದರಿಂದ ಒಂದು ಬಗೆಯ ಕಲಮಲವೆದ್ದಿದೆ. ಗಂಡಾಂತರ ಪ್ರಸಂಗದಲ್ಲಿ ದಕ್ಷಿಣ ಇರಾಣದ ಬ್ರಿಟಿಶ ಎಣ್ಣೆಕಣಗಳಲ್ಲಿ ಕೆಲಸ ಮಾಡುವ ನೂರಾರು ಹಿಂದೀ ಕೂಲಿಕಾರರನ್ನು ಹಾಗು ಅಲ್ಲಿನ ಹಿಂದೀ ಮತ್ತು ಬ್ರಿಟಿಶ ಹಿತಸಂಬಂಧಗಳನ್ನು ರಕ್ಷಿಸಲು ಅವಶ್ಯವಾಗುವಂತೆ ಈ ಸೈನಿಕರನ್ನು ಕಳಿಸಲಾಗಿದೆಯೆಂದು ಹಿಂದುಸ್ತಾನ ಸರಕಾರದ ಹೇಳಿಕೆ. ಎಣ್ಣೆ ಕಣ ಭಾಗದಲ್ಲಿ ಈಚೆಗೆ ರಶಿಯನ್ ತಂತ್ರದಿಂದ ಎಂದು ಸಂಶಯಿಸಲ್ಪಟ್ಟ ಕೂಲಿಕಾರ ಗೊಂದಲವಾದುದು ಓದುಗರ ನೆನಪಿನಲ್ಲಿರಬಹುದು. ಈಗ ಈ ನೆಪದಿಂದ ಮುಂದೊಡ್ಡಿ ಬಸರಾಕ್ಕೆ ಹೆಚ್ಚು ಸೈನ್ಯ ಕಳಿಸಲಾಗಿದೆ. ಆದರೆ ಇದರಿಂದ ಇರಾಣಕ್ಕೆ ದಿಗಿಲುಂಟಾಗಿದೆ. ಮುಖ್ಯ ಮಂತ್ರಿ ಸುಲ್ತಾನೆಯವರು ವಿದೇಶೀ ಸೈನ್ಯಗಳು ಇರಾಣದಲ್ಲಿ ಪ್ರವೇಶಿಸುವದನ್ನು ನಾವು ಸರ್ವಥಾ ಸಹಿಸಲಾರೆವೆಂದು ಸಾರಿದ್ದಲ್ಲದೆ ಹಿಂದುಸ್ತಾನ ಸರಕಾರದ ಈ ಕೃತಿಯನ್ನು ಪ್ರತಿಭಟಿಸಿದ್ದಾರೆ. ಎಣ್ಣೆ ಕಣ ಪ್ರದೇಶದಲ್ಲಿ ಶಾಂತಿ ಸುವ್ಯವಸ್ಥೆಗಳನ್ನು ಕಾಯ್ದುಕೊಳ್ಳಲು ಇರಾಣ ಸರಕಾರ ಸಮರ್ಥವಾಗಿಲ್ಲವೆಂಬ ನಿರಾಧಾರ ಊಹೆಯನ್ನು ಆಧಾರವಾಗಿಟ್ಟುಕೊಂಡು ದುರ್ಬಲ ರಾಷ್ಟ್ರವೊಂದನ್ನು ಬೆದರಿಸಲು ಬ್ರಿಟಿಶರು ಈ ಹೂಟ ಹೂಡಿದ್ದಾರೆ. ಇರಾಣದ ಗಡಿಯ ಹತ್ತಿರ ಪ್ರಬಲ ಬ್ರಿಟಿಶ ಸೈನ್ಯವಿರುವದು ಆ ದೇಶದ ಹೃದಯಕ್ಕೆ ಬಂದೂಕನ್ನು ಗುರಿಹಿಡಿದಂತೆ. ಆದರೆ ಈ ಕೃತಿಯ ಹಿಂದೆ ಇನ್ನೊಂದು ಪ್ರಚ್ಛನ್ನ ಉದ್ದೇಶ ಅಡಗಿರುವ ಸಂಭವವಿದೆ. ಅರಬ ರಾಷ್ಟ್ರಗಳಲ್ಲಿ ಪಾಲಿಸ್ತಾನದ ವಿಚಾರಕ್ಕೆ ಎದ್ದಿರುವ ಅಸಂತುಷ್ಟಿಯ ಪರಿಣಾಮವನ್ನು ಎದುರಿಸುವಗೋಸುಗ ಬಸರಾದ ಸೈನ್ಯವನ್ನು ಹೆಚ್ಚಿಸಿರುವ ಸಂಭವವೂ ಉಂಟು. ಬಸರಾ ನೆಲೆ ಪಾಲಿಸ್ತಾನಕ್ಕೆ ಹತ್ತಿರವಾಗಿದೆಯೆಂಬುದನ್ನು ನಾವು ಮರೆಯಬಾರದು.

### ಚರ್ಚಿಲರ ಮತ್ತು ಸಾಮ್ರಾಜ್ಯ

ಬ್ರಿಟಿಶ್ ಕೂಲಿಕಾರ ಸರಕಾರದ ಈಚೆಗಿನ ಧೋರಣೆಯಿಂದ ಚರ್ಚಿಲ್ಲರಿಗೂ ಅವರ ಕಾನ್ಸರ್ವೇಟಿವ ಪಕ್ಷಕ್ಕೂ ಎಷ್ಟು ಗಾಬರಿಯುಂಟಾಗಿದೆಯೆಂದು ಪಾಲಿಸ್ತಾನದ ಚರ್ಚೆಯ ಕಾಲಕ್ಕೆ ಅವರು ಪಾರ್ಲಮೆಂಟಿನಲ್ಲಿ ಮಾಡಿದ ಭಾಷಣದಿಂದ ವ್ಯಕ್ತವಾಗುತ್ತದೆ.

" ನಮಗೆ ನಿಸ್ಸಂದಿಗ್ಧವಾದ ಹಕ್ಕುಳ್ಳ ೪೦ ಕೋಟಿ ಜನಸಂಖ್ಯೆಯುಳ್ಳ ಹಿಂದುಸ್ತಾನವನ್ನು ಬಿಟ್ಟುಕೊಡಲು ನಾವು ಸಮ್ಮತಿಸಿದ್ದೇವೆ. ಸುಯೇಜ ಕಾಲುವೆಯ ರಕ್ಷಣೆಗೆ ಇಜಿಪ್ತದಲ್ಲಿ ಸೈನ್ಯವಿರಿಸುವ ಅಧಿಕಾರವಿದ್ದರೂ ಅದನ್ನು ತ್ಯಜಿಸಲು ಸಿದ್ಧರಾಗಿದ್ದೇವೆ... ಇನ್ನು ಪಾಲಿಸ್ತಾನವನ್ನಾದರೂ ಬಿಡದೆ ನಾವು ಅಲ್ಲಿ ಗಟ್ಟಿಯಾಗಿ ಕಾಲೂರಿ ಸುಯೇಜ ಕಾಲುವೆಯನ್ನು ರಕ್ಷಿಸಬೇಕೆಂಬ" ಅಭಿಪ್ರಾಯ ಬರುವ ಮಾತುಗಳನ್ನು ಅವರು ಆಡಿದರು. ಪಾಲಿಸ್ತಾನವನ್ನು ವಿಭಜಿಸುವ ಬದಲು ಅದನ್ನು ಅಂತರ್‌ರಾಷ್ಟ್ರೀಯ ವಿಶ್ವಸ್ತಿಕೆಗೆ ಒಪ್ಪಿಸಬೇಕೆಂಬ ಅವರ ಸೂಚನೆಯ ಕೆಳಗೆ ಆ ವಿಶ್ವಸ್ತಿಕೆ ಬ್ರಿಟನಿಗೇ ದೊರೆಯಬೇಕೆಂಬ ದುರುದ್ದೇಶ ಅಡಕವಾಗಿದೆ. ಸಾಮ್ರಾಜ್ಯ ಕಣ್ಣುಂದೆ ಕರಗುತ್ತಿದ್ದರೂ ಚರ್ಚಿಲ್ಲರಿಗೆ ಕಾಣಿಸದಾಗಿದೆ ಹಿಂದುಸ್ತಾನವನ್ನು ಕುರಿತು ಕೂಲಿಕಾರ ಸರಕಾರ ವಹಿಸಿದ ಧೋರಣೆ ತಮ್ಮ ಕಾನ್ಸರ್ವೇಟಿವ ಪಕ್ಷಕ್ಕೆ ಬಂಧಕವಲ್ಲವೆಂದು ಅವರು ಸಾರಿದ್ದಾರೆ.

* * *

ತುರ್ಕಿಯ ಅಧ್ಯಕ್ಷರಾಗಿ ಇಸ್ಮೆತ್ ಇನೇನು ಅವರು ಮೂರನೆ ಬಾರಿ ಆರಿಸಲ್ಪಟ್ಟಿದ್ದಾರೆ. ತುರ್ಕಿಯ ಮುಖ್ಯಮಂತ್ರಿ ಸರಜೋಗುಲು ಅವರ ಮಂತ್ರಿಮಂಡಲ ನಿರೀಕ್ಷಿತವಾಗಿ ರಾಜೀನಾಮೆ ಇತ್ತಿದ್ದು ಹಿಂದಿನ ಸಂರಕ್ಷಣ ಮಂತ್ರಿಯಾದ ಪೇಕ ಅವರು ಮಂತ್ರಿಮಂಡಲ ರಚಿಸಲು ಪ್ರಯತ್ನಿಸುತಿದ್ದಾರೆ.

* * *

ಸಂಯುಕ್ತ ಆಹಾರ ಸಮಿತಿಯ ಉತ್ತರಾಧಿಕಾರಿಯಾದ ಅಂತರ್‌ರಾಷ್ಟ್ರೀಯ ಅವಸರ ಆಹಾರ ಮಂಡಲದವರು ಹಿಂದುಸ್ತಾನದ ಬೇಡಿಕೆಯಾದ ೭ ಲಕ್ಷ ಟನ್ ಅಕ್ಕಿಯ ಬದಲು ಈ ವರ್ಷಾಂತ್ಯದ ವರೆಗೆ ೨, ೭೦, ೦೦೦ ಟನ್ ಅಕ್ಕಿಯನ್ನು ಕಳಿಸಲು ನಿರ್ಧರಿಸಿದ್ದಾರೆ. ಅಕ್ಕಿ ಉಣ್ಣುವ ದೇಶಗಳಿಂದ ಬಂದ ಬೇಡಿಕೆ ೩೦ ಲಕ್ಷ ಟನ್ ಗಳಷ್ಟು ಇದೆಯೆಂದೂ ಸಂಗ್ರಹ ವಿರುವದು ಬರಿ ೧೦ ಲಕ್ಷಕ್ಕಿಂತಲೂ ಕಡಿಮೆಯೆಂದೂ ಅವರು ಹೇಳಿದ್ದಾರೆ.

# ಮದ್ರಾಸ ಸರಕಾರದ ಪ್ರಚಂಡ ಖಾದಿ ಯೋಜನೆ

## ಹಳ್ಳಿಗಳನ್ನು ಸ್ವಯಂಪೂರ್ಣ ಮಾಡಲು ಪ್ರಯತ್ನ

### ಇದೇ ನವಂಬರದೊಳಗೆ ೧ ಲಕ್ಷ ಚರಕಾ ಹಂಚುವರು ವರ್ಷಕ್ಕೆ ೧೪೦ ಲಕ್ಷ ಗಜ ತಯಾರಿಸುವ ಗುರಿ

ಮದ್ರಾಸ ಸರಕಾರದವರು ಹಳ್ಳಿಗಳನ್ನು ಸಾಧ್ಯವಿದ್ದಷ್ಟು ಸ್ವಾಯಂಪೂರ್ಣ ಸ್ವಾವಲಂಬಿಯಾಗಿ ಮಾಡುವ ಸಲುವಾಗಿ ಒಂದು ಖಾದಿ ಯೋಜನೆಯನ್ನು ಸಿದ್ಧಗೊಳಿಸಿದ್ದಾರೆ. ಅದನ್ನು ಮುಖ್ಯಮಂತ್ರಿಗಳು ಆರಿಸುವ ೨೫ ಫಿರ್ಕಾಗಳಲ್ಲಿ ಮೊದಲು ಆಚರಣೆಗೆ ತರಲಾಗುವದು. ಅವುಗಳಲ್ಲೆರಡು ವಿಶಾಖಪಟ್ಟಣ ಜಿಲ್ಹೆಯಲ್ಲಿಯೂ ಉಳಿದ ಫಿರ್ಕಾಗಳು ಉಳಿದ ಜಿಲ್ಹೆಗಳಲ್ಲಿ ಪ್ರತಿಯೊಂದರಲ್ಲಿ ಒಂದರಂತೆಯೂ ಇರುವದು.

ಹೀಗೆ ಆರಿಸಲ್ಪಟ್ಟ ಪ್ರತಿಯೊಂದು ಫಿರ್ಕಾದ ಎಲ್ಲ ನಿವಾಸಿಗಳ ಪೂರ್ಣ ಅರಿವೆಯ ಅವಶ್ಯಕತೆಯನ್ನು ಆ ಫಿರ್ಕಾದಲ್ಲಿಯೇ ಖಾದೀ ರೂಪದಲ್ಲಿ ಉತ್ಪಾದನೆ ಮಾಡಬೇಕೆಂದು ಉದ್ದೇಶಿಸಲಾಗಿದೆ. ನೂಲುವವರಲ್ಲಿ ಹೆಚ್ಚಿನವರು ಹೊಸಬರಾಗಬೇಕಾಗುವದು. ಅಲ್ಲದೆ ಅವರು ದಿನವಿಡೀ ಇದೇ ಕೆಲಸ ಮಾಡಲಾರರು. ಈ ಕಾರಣದಿಂದ ಪ್ರತಿಯೊಂದು ಚರಖಾಕ್ಕೆ ಸರಾಸರಿ ವರ್ಷಕ್ಕೆ ೩೬೦ ಲಡಿಗಿಂತ ಹೆಚ್ಚು ನೂಲು ಹುಟ್ಟಲಾರದೆಂದು ಹಿಡಿಯಲಾಗಿದೆ. ಪ್ರತಿಯೊಂದು ಫಿರ್ಕಾದಲ್ಲಿ ಎಷ್ಟು ಕುಟುಂಬಗಳು ವಾಸಿಸುತಿವೆಯೋ ಅಷ್ಟೇ ಚರಕಾಗಳು ತಿರುಗುತ್ತಿರಬೇಕೆಂದು ಯೋಜಿಸಲಾಗಿದೆ. ಈ ಪ್ರಕಾರ ವರ್ಷಕ್ಕೆ ಪ್ರತಿ ಕುಟುಂಬಕ್ಕೆ ೮೫ ವಾರ ಖಾದಿ ಒದಗಿಸಲಿಕ್ಕೆ ಸಾಧ್ಯವಾಗಬೇಕು ಅಂದರೆ ಪ್ರತಿ ವಯಸ್ಕನಿಗೆ ೨೦ ವಾರು ಮತ್ತು ಮಕ್ಕಳಿಗೆ ೧೦ ವಾರು ಬಟ್ಟೆ ದೊರತಂತಾಗುವದು.

ಪ್ರಾಂತಿಕ ಜವಳಿ ಕಮೀಶನರರು ಗೊತ್ತುಪಡಿಸುವ ದಿನದಿಂದ ೧೫ ದಿನಗಳೊಳಗೆ ಆ ಫಿರ್ಕಾಗಳಲ್ಲಿರುವ ಪ್ರತಿಯೊಂದು ಕುಟುಂಬವೂ ಕಡಿಮೆಯೆಂದರೆ ಒಂದೊಂದು ಚರಖಾವನ್ನಿಟ್ಟುಕೊಳ್ಳಬೇಕೆಂದು ಕೇಳಿಕೊಳ್ಳಲಾಗುವದು. ಅಲ್ಲದೆ ಫಿರ್ಕಾ ಖಾದಿ ಅಧಿಕಾರಿಗೆ ಆಯಾ ಕುಟುಂಬದಿಂದ ನೂಲುವಿಕೆಯನ್ನು ಕಲಿಯಲು ಸಿದ್ಧರಾಗಿರುವ ಕನಿಷ್ಠ ಒಬ್ಬ ಸದಸ್ಯನ ಹೆಸರನ್ನು ತಿಳಿಸಲು ಪ್ರಾರ್ಥಿಸಿಕೊಳ್ಳಲಾಗುವದು. ಪ್ರತಿಯೊಂದು ಕುಟುಂಬವೂ ತಿಂಗಳಿಗೆ ಕನಿಷ್ಠ ಇಂತಿಷ್ಟು ಕೈನೂಲನ್ನು ತೆಗೆದು ಕೊಡಬೇಕೆಂದು ಗೊತ್ತುಪಡಿಸಲಾಗುವದು. ಈ ವಿಷಯದಲ್ಲಿ ಗ್ರಾಮಸಮಿತಿಯ ಸಲಹೆಯನ್ನು ಕೇಳಿಕೊಳ್ಳಲಾಗುವದಲ್ಲದೆ ಆಯಾ ಕುಟುಂಬದ ಉದ್ಯೋಗವನ್ನು ಲಕ್ಷದಲ್ಲಿಟ್ಟುಕೊಂಡೇ ಪ್ರಮಾಣವನ್ನು ಗೊತ್ತುಪಡಿಸಲಾಗುವದು.

## ಅಧಿಕೃತ ಏಜನ್ಸಿಗಳು

ಇದಾದ ಮೇಲೆ ಶಕ್ಯವಿದ್ದಷ್ಟು ಕೈಮಗ್ಗಗಳನ್ನು ಖಾದಿ ನೇಯುವ ಸಲುವಾಗಿ ಮೀಸಲಿಡಲಾಗುವದು. ಅಂದರೆ ನಿರ್ದಿಷ್ಟ ದಿನದ ನಂತರ ಆಯಾ ಫಿರ್ಕಾಗಳಲ್ಲಿರುವ ಕೈಮಗ್ಗಗಳಿಗೆ ಗಿರಣಿ ನೂಲು ಪೂರೈಕೆಯನ್ನು ನಿಲ್ಲಿಸಿಬಿಡಲಾಗುವದು. ಅವುಗಳಿಗೆ ಬೇಕಾಗುವಷ್ಟು ಕೈನೂಲನ್ನೆ ಒದಗಿಸುವದು ಅಷ್ಟರಲ್ಲಿ ಸಾಧ್ಯವಾಗುವದು. ಆರಿಸಲ್ಪಟ್ಟ ಫಿರ್ಕಾಗಳಲ್ಲಿಯೂ ಅ. ಭಾ. ಚರಖಾ ಸಂಘ ಮತ್ತು ಅದರ ಅಧಿಕೃತ ಸಂಸ್ಥೆಗಳು ಕೆಲಸ ಮಾಡುತ್ತಿರುವ ಪ್ರದೇಶಗಳಲ್ಲಿಯೂ ಅನಧಿಕೃತ ಸಂಸ್ಥೆಗಳು ವ್ಯವಹರಿಸುವದರಿಂದ ಅಧಿಕೃತ ಸಂಸ್ಥೆಗಳ ಕೆಲಸಕ್ಕೆ ಬಾಧೆ ತಪ್ಪುವದೆಂದು ಜವಳಿ ಕಮೀಶನರನಿಗೆ ತೋರಬಹುದಾದ ಇತರ ಪ್ರದೇಶಗಳಲ್ಲಿಯೂ ಸರಕಾರದಿಂದ ಅಧಿಕಾರ ಹೊಂದಿದ ಸಂಸ್ಥೆಗಳಿಗೆ ಮಾತ್ರವೇ ಕೈನೂಲಿನ ಮತ್ತು ಖಾದಿಯ ಉತ್ಪಾದನೆಯ ವ್ಯವಹಾರ ಸಾಗಿಸಲು ಅಪ್ಪಣೆ ಕೊಡಲಾಗುವದು. ಅಧಿಕಾರ ಹೊಂದಿದ ಸಂಸ್ಥೆಗಳೆಂದರೆ ಈ ಯೋಜನೆಯನ್ವಯ ಸ್ಥಾಪಿಸಲ್ಪಡುವ ಸರಕಾರಿ ಸಂಸ್ಥೆ, ಅ. ಭಾ. ಚರಖಾಸಂಘ ಮತ್ತು ಅದರ ಅಪ್ಪಣೆ ಪಡೆದ ಸಂಸ್ಥೆಗಳು ಮತ್ತು ನೊದಲೆ ಪ್ರಾಂತಿಕ ಸರಕಾರದಿಂದ ಈ ವಿಷಯದಲ್ಲಿ ಅಪ್ಪಣೆ ಹೊಂದಿದ ಇತರ ಸಂಸ್ಥೆಗಳೆಂದು ಅರ್ಥ.

ಪ್ರತಿಯೊಂದು ಫಿರ್ಕಾದಲ್ಲಿಯೂ ಯೋಜನೆ ಪ್ರಗತಿ ಹೊಂದುತ್ತ ಹೋದಂತೆ ಅಲ್ಲಿಯ ಕುಟುಂಬಗಳಿಗೆ ಒದಗಿಸಲ್ಪಡುವ ಗಿರಣಿ ಅರಿವೆಗಳ ಮತ್ತು ಗಿರಣಿ ನೂಲಿನ ಕೈಮಗ್ಗದ ಅರಿವೆಗಳ ಪರಿಮಾಣವನ್ನು ಕಡಿಮೆ ಮಾಡಲಾಗುವದು. ಆಯಾ ಫಿರ್ಕಾದಲ್ಲಿ ಹಂಚಲು ಸಿಗುವ ಖಾದಿ ಬಟ್ಟೆಯ ಪ್ರಮಾಣವನ್ನು ಅರಿತೇ ಈ ನಿಯಮವನ್ನು ಮಾಡಲಾಗುವದು.

ನೂಲುವ ಉಪಕರಣಗಳು ಮತ್ತು ಅರಳೆ ಇವುಗಳ ಪೂರೈಕೆ ೧೯೪೬ ಅಗಸ್ಟದಿಂದಲೇ ಪ್ರಾರಂಭವಾಗುವದು. ಆದರೆ ಈವರ್ಷ ನವಂಬರ ತಿಂಗಳ ಅಂತ್ಯದೊಳಗೆ ೧ ಲಕ್ಷ ಚರಕಾಗಳಿಗಿಂತ ಹೆಚ್ಚು ಪೂರೈಸುವದು ಅಸಂಭವವೆಂದು ತೋರುತ್ತದೆ. ನೂಲುವವರು ತಮಗೆ ಬೇಕಾದ ಅರಳೆಯನ್ನು ತಾವೇ ದೊರಕಿಸಿಕೊಳ್ಳಲು ಉತ್ತೇಜನ ಕೊಡಲಾಗುವದು. ಆದರೆ ಅವರು ತಮಗೂ ತಮ್ಮ ಕುಟುಂಬಕ್ಕೂ ಬಟ್ಟೆ ನೇಯಿಸಿಕೊಳ್ಳಲು ಬೇಕಾಗುವದಕ್ಕಿಂತ ಹೆಚ್ಚಾಗಿ ಉಳಿದ ನೂಲನ್ನು ಸರಕಾರಕ್ಕೆ ನಿಯಂತ್ರಿತ ದರಗಳಲ್ಲಿ ಮಾರಬೇಕಾಗುವದು. ಪ್ರಾಂತದಲ್ಲಿರುವ ಅಧಿಕಾಂಶ ನೂಲುವವರಿಗೆ ಸರಕಾರವೇ ಅರಳೆಯನ್ನು ಒದಗಿಸಿ ಕೊಡಬೇಕಾಗುವದು. ಇದನ್ನು ಅವರಿಗೆ ಖಾದಿ ಇನಸ್ಪೆಕ್ಟರುಗಳ ಮೂಲಕ ಪೂರೈಸಲಾಗುವದು. ತಾವು ನೂತ ನೂಲಿನಿಂದಲೆ ತಮ್ಮ ಕುಟುಂಬಕ್ಕೆ ಬೇಕಾದ ಅರಿವೆ ನೇಯಬೇಕೆಂದು ಯಾರಾದರೂ ಅಪೇಕ್ಷಿಸಿದರೆ ವಿಶಿಷ್ಟ ನೇಕಾರರಿಂದ ಅವರ ನೂಲನ್ನೇ ಅವರಿಗಾಗಿ ನೇಯಿಸಿಕೊಡುವ ವ್ಯವಸ್ಥೆ ಮಾಡಲಾಗುವದು. ಉಳಿತಾಯವಾದ ನೂಲನ್ನು ಮಾತ್ರ ಸರಕಾರಕ್ಕೇ ಮಾರಬೇಕು.

ನೂಲುವದನ್ನು ಕಲಿಸಲು ಅ. ಭಾ. ಚರಖಾ ಸಂಘದಿಂದ ಶಿಕ್ಷಕರನ್ನು ಎರವು ತೆಗೆದುಕೊಳ್ಳಲಾಗುವದು. ಪ್ರತಿಯೊಬ್ಬ ಶಿಕ್ಷಕನು ದಿನಕ್ಕೆ ಎರಡು ತಾಸಿನಂತೆ ೨೫ ವಿದ್ಯಾರ್ಥಿಗಳ ಮೂರು ವರ್ಗಗಳಿಗೆ ೩೦ ದಿನಗಳ ವರೆಗೆ ಶಿಕ್ಷಣ ಕೊಡುವರು. ಇಷ್ಟು ತರಬೇತಿ ಸರಿಯಾಗಿ ನೂಲು ತೆಗೆಯಬೇಕಾದರೆ ಅತ್ಯವಶ್ಯ.

## ಸರಕಾರದ ಸಹಾಯ ಧನ

ನೂಲುವವರಿಗೆ ಸರಕಾರ ಸಹಾಯ ಧನವನ್ನೂ ಕೊಡುವದು. ಆದರೆ ಅದು ನೇಯುವ ವೆಚ್ಚದಲ್ಲಿ ಕೆಲವಂಶವನ್ನು ಮುಕ್ತಿ ಬಿಡುವ ರೂಪದಲ್ಲಿ ಕೊಡಲ್ಪಡುವದು. ಕೈನೂಲನ್ನು ನೇಯಿಸಿ ಕೊಡುವ ಕೆಲಸವನ್ನು ಸರಕಾರವೇ ಮಾಡುವದರಿಂದ ಅದಕ್ಕಾಗಿ ಕೊಟ್ಟ ಕೂಲಿಯಲ್ಲಿ ಕೆಲವಂಶವನ್ನು ಸರಕಾರವೇ ವಹಿಸಿ ನೂಲುವವರಿಗೆ ಉತ್ತೇಜನ ಕೊಡುವದು. ಹೀಗೆ ಸಹಾಯ ಧನಕ್ಕೆ ಯೋಗ್ಯರೋ ಅಲ್ಲವೋ ಎಂಬುದನ್ನು ಪ್ರತಿ ಕುಟುಂಬದ ಪರಿಸ್ಥಿತಿ ನೋಡಿ ನಿರ್ಧರಿಸಲಾಗುವದು. ಯೋಗ್ಯವೆಂದು ಪರಿಗಣಿಸಲ್ಪಟ್ಟ ಕುಟುಂಬಗಳನ್ನು (೧) ಹರಿಜನರು ಮತ್ತು ಹೊಲವಿಲ್ಲದ ಅಕುಶಲ ಕೆಲಸಗಾರರು ಮತ್ತು (೨) ಇತರರು ಎಂದು ಎರಡು ವರ್ಗಗಳನ್ನಾಗಿ ವಿಂಗಡಿಸಿ ಮೊದಲನೆ ವರ್ಗದವರ ನೂಲಿನ ನೇಯ್ಗೆಗಾಗಿ ಸರಕಾರದವರು ನೇಕಾರರಿಗೆ ಕೊಟ್ಟ ಹಣದಲ್ಲಿ ವಾರಿಗೆ ೬ ಆಣೆ ಮತ್ತು ಎರಡನೆಯವರದರಲ್ಲಿ ವಾರಿಗೆ ೪ ಆಣೆ ಅಂಶವನ್ನು ಸರಕಾರವೇ ಹೊರುವದು.

ಆರಿಸಲ್ಪಟ್ಟ ಫಿರ್ಕಾಗಳಲ್ಲಿ ಪ್ರತಿಯೊಂದರಲ್ಲಿಯೂ ಒಂದು ವಿಶೇಷ ಫಿರ್ಕಾ ಖಾದಿ ಸಮಿತಿಯನ್ನು ಸ್ಥಾಪಿಸಲಾಗುವದು. ಪ್ರತಿ ಹಳ್ಳಿಗೂ ಮೂರರಿಂದ ಐದು ಜನ ಪ್ರಭಾವಶಾಲಿ ನಿವಾಸಿಗಳಿರುವ ಗ್ರಾಮ ಖಾದಿ ಸಮಿತಿಗಳನ್ನು ಏರ್ಪಡಿಸಬೇಕು. ಗ್ರಾಮ ಸಮಿತಿಯವರು ಯೋಜನೆಯ ಬಗ್ಗೆ ಜನರಲ್ಲಿ ಹುರುಪು ತುಂಬುವಗೋಸ್ಕರ ಮನೆಮನೆಗೆ ಪ್ರಚಾರ ನಡೆಸಬೇಕು. ಫಿರ್ಕಾ ಸಮಿತಿ ಕಾಲಕಾಲಕ್ಕೆ ಫಿರ್ಕಾದಲ್ಲಾದ ಪ್ರಗತಿಯನ್ನು ಸಿಂಹಾವಲೋಕನ ಮಾಡುವದು. ಯೋಜನೆ ಫಲಕಾರಿಯಾಗುವಂತೆ ಮಾಡುವ ಹೊಣೆ ಫಿರ್ಕಾ ಸಮಿತಿಯ ಮೇಲಿದೆ. ೧೬ ಸದಸ್ಯರನ್ನೊಳಗೊಂಡ ಪ್ರಾಂತಿಕ ಖಾದಿ ಬೋರ್ಡೊಂದು ಸ್ಥಾಪಿಸಲ್ಪಡುವದು. ಅದರಲ್ಲಿ ಮುಖ್ಯ ಮಂತ್ರಿಗಳು (ಅಧ್ಯಕ್ಷ), ಉದ್ಯೋಗ, ಕೂಲಿಕಾರ ಮಂತ್ರಿಗಳು, ಗ್ರಾಮೋದ್ಯೋಗ ಮಂತ್ರಿಗಳು, ಒಕ್ಕಲತನ ಮಂತ್ರಿಗಳು ಅ. ಭಾ. ಚರಖಾ ಸಂಘದ ಆಂಧ್ರ, ತಮಿಳನಾಡು, ಕೇರಳ ಶಾಖೆಗಳ ಮುಖ್ಯಾಧಿಕಾರಿಗಳು ಇರುವರು. ಕಾಲ ಕಾಲಕ್ಕೆ ಈ ಬೋರ್ಡು ಯೋಜನೆಯ ಪ್ರಗತಿಯನ್ನು ಪರಿಶೀಲಿಸಿ ಅದು ಸಫಲವಾಗುವಂತೆ ಮಾಡುವ ಉಪಾಯಗಳನ್ನು ಯೋಜಿಸುವದು.

ಫಿರ್ಕಾ ಮತ್ತು ಗ್ರಾಮ ಸಮಿತಿಗಳೇ ಈ ಯೋಜನೆಯನ್ನು ಕಾರ್ಯಕಾರಿಯಾಗಿ ಮಾಡುವವು. ಆಡಳಿತ ಸಿಬಂದಿಯನ್ನೂ ಅವಶ್ಯಕ ಧನಸಹಾಯವನ್ನೂ ಸರಕಾರ ಒದಗಿಸಿ ಯೋಜನೆಯ ಆಡಳಿತ, ಹಣಕಾಸುಗಳ ವ್ಯವಸ್ಥೆಯನ್ನು ಹಿಡಿತದಲ್ಲಿಟ್ಟುಕೊಳ್ಳುವನು. ಯೋಜನೆಗೆ ಸಂಬಂಧಪಟ್ಟ ಅಧಿಕಾರಿಗಳು ತಮ್ಮ ಸರ್ವ ಶಕ್ತಿಯನ್ನೂ ಉಪಯೋಗಿಸುವರು. ಆದರೆ ಯೋಜನೆ ಯಶಸ್ವಿಯಾಗಬೇಕಾದರೆ ಫಿರ್ಕಾ, ಗ್ರಾಮ ಸಮಿತಿಗಳೂ ಹಳ್ಳಿಗರೂ ಹುರುಪಿನಿಂದ ಸಹಕರಿಸಬೇಕು, ಆ ಹುರುಪನ್ನು ಕಾಯ್ದುಕೊಳ್ಳಬೇಕು. ಒಂದು ನಿರ್ದಿಷ್ಟ ಅವಧಿಯ ನಂತರ ಸರಕಾರದ ಆರ್ಥಿಕ ಮತ್ತು ಆಡಳಿತದ ಸಹಾಯವನ್ನು ಹಿಂತೆಗೆದುಕೊಳ್ಳಬೇಕೆಂಬುದು ಸರಕಾರದ ಉದ್ದೇಶ. ಇಷ್ಟು ದೊಡ್ಡ ವೆಚ್ಚವನ್ನು ವರ್ಷ ವರ್ಷವೂ ಹೊರುವದು ಸಾಧ್ಯವಿಲ್ಲ. ೨೫ ಫಿರ್ಕಾಗಳಿಗೆ ಮಾತ್ರ ಸೀಮಿತವಾದ ಈ ಯೋಜನೆಯನ್ನು ೧೯೪೮ ಮಾರ್ಚ ೩೧ ರ ವರೆಗೆ ಮಾತ್ರ ಸರಕಾರ ಸಾಗಿಸುವದು. ಹೀಗೆ ಕಾರ್ಯರೂಪಕ್ಕೆ ತಂದ ಯೋಜನೆಯಿಂದ ಆಯಾ ಫಿರ್ಕಾಗಳಲ್ಲಿರುವ ಹಳ್ಳಿಗರಿಗಷ್ಟೇ ಅಲ್ಲ, ಆಯಾ ಜಿಲ್ಹೆಯ ಇತರ ಭಾಗಗಳ ಜನರಿಗೂ ತಮ್ಮ ಬಟ್ಟೆಯನ್ನು ತಾವೇ ಹೇಗೆ ಹುಟ್ಟಿಸಿಕೊಳ್ಳಬಹುದೆಂಬ ಮಾತು ಮನದಟ್ಟಾದೀತೆಂದು ಸರಕಾರ ಆಶಿಸುತ್ತವೆ. ಸರಕಾರದ ಸಹಾಯವಿಲ್ಲದೆ ತಾವು ಹೇಗೆ ಸ್ವಾವಲಂಬಿಗಳಾಗಿ ಈ ಕೆಲಸವನ್ನು ಮುಂದೆ ಸಾಗಿಸಬೇಕೆಂಬ ಉಪಾಯವೂ ಅಷ್ಟರಲ್ಲಿ ಅವರಿಗೆ ಹೊಳೆದೀತು.

ಯೋಜನೆ ಯಶಸ್ವಿಯಾದರೆ ಪ್ರಾಂತದ ಖಾದಿ ಉತ್ಪಾದನೆ ವರ್ಷಕ್ಕೆ ೧೪೪ ಲಕ್ಷ ವಾರುಗಳಷ್ಟು ಅಂದರೆ ೯೬೦೦ ಬೇಲುಗಳಷ್ಟು ಆಗುವದು.

# ದ. ಆಫ್ರಿಕೆಯ ಮೇಲೆ ಹಿಂದೀ ಆರ್ಥಿಕ ದಂಡನೆಯ ಪರಿಣಾಮ

## ಎಣ್ಣೆ, ಚೀಲ, ಸಾಬಾಣ ಮೊದಲಾದವುಗಳ ಕೊರತೆ

ದಕ್ಷಿಣ ಆಫ್ರಿಕಾ ಹಿಂದಿ ಕಾಂಗ್ರೆಸ್ಸಿನ ಹಿಂದುಸ್ತಾನದಲ್ಲಿಯ ಪ್ರತಿನಿಧಿಗಳಾದ ಸ್ವಾಮಿ ಭವಾನಿ ದಯಾಳ ಸನ್ಯಾಸಿ ಹಾಗು ಡಾ. ಲಂಕಾ ಸುಂದರಂ ಅವರು ದಕ್ಷಿಣ ಆಫ್ರಿಕೆ ಮೇಲೆ ಹಿಂದುಸ್ತಾನ [illegible] ಹೇರಿದ ಆರ್ಥಿಕ ದಂಡನೆಯ ಪರಿಶೀಲನೆ ನಡೆಸಿ ಆದರಿಂದಾದ ಪರಿಣಾಮವನ್ನು ಕೆಳಗಿನಂತೆ ಉಲ್ಲೇಖಿಸಿದ್ದಾರೆ.

ದಕ್ಷಿಣ ಆಫ್ರಿಕೆಯಲ್ಲಿ ಈಗ ಸಾಬಾಣ, ಎಣ್ಣೆ, ಅಗ್ಗ ಜವಳಿ, ಕಾಲಿಕೊ, ತಟ್ಟಿನ ಚೀಲ ಇವುಗಳ ಕೊರತೆ ವಿಶೇಷವಾಗಿರುವದು. ಹಿಂದುಸ್ತಾನದಿಂದ ಶೆಂಗಾ ಹೋಗದಂತಾದ್ದರಿಂದ ಕೆಲವು ಎಣ್ಣೆ ಕಾರಖಾನೆಗಳು ಮುಚ್ಚಿಹೋಗಿವೆ. ಸಾಬೂಣಗಳ ಸೀದಾ ನಡೆದಿದೆ. ಉಪ್ಪು ಹಾಗು ಸಿಮೆಂಟ ಉದ್ಯೋಗಗಳಿಗೆ ತಟ್ಟಿನ ಚೀಲಗಳು ಇಲ್ಲದಂತಾಗಿದೆ. ಇದರಂತೆ ಹಣ್ಣಿನ ಉದ್ಯೋಗಕ್ಕೂ ಧಕ್ಕೆ ತಟ್ಟಿದೆ.

ದಕ್ಷಿಣ ಆಫ್ರಿಕೆಯ ಅವಶ್ಯಕತೆಗಳಲ್ಲಿ ಹಿಂದುಸ್ತಾನವೇ ೧೦೦ ಕ್ಕೆ ೨೦ ರಷ್ಟು ಪೂರೈಸುತ್ತಿತ್ತು. ಇನ್ನು ಹಿಂದುಸ್ತಾನವು ಬ್ರಿಟಿಶ ಸರಕಾರದಿಂದ ಬ್ರಿಟನಕ್ಕೆ ಹೋದ ಚಹಾ, ರಬ್ಬರ ಮೊದಲಾದವುಗಳನ್ನು ಅತ್ತ ಕಳಿಸಲಾಗುವದಿಲ್ಲೆಂಬ ಆಶ್ವಾಸನೆ ಪಡೆದುಕೊಳ್ಳಬೇಕು. ಯಾಕೆಂದರೆ ಯೂನಿಯನದಲ್ಲಿಯ ಲಾಯಸೆನ್ಸ ಚಹಾದ ಮ್ಯಾನೇಜರರು ಹಿಂದುಸ್ತಾನವು ಹಾಕಿದ ನಿರ್ಬಂಧವು ತಮ್ಮ ಕಂಪನಿಗೆ ಅನ್ವಯಿಸುವದಿಲ್ಲೆಂದು ಸಾರಿದ್ದಾರೆ.

ಹಿಂದುಸ್ತಾನದ ಕಂಪನಿ ಕಾಯದೆಯಲ್ಲಿ ತಿದ್ದುಪಡಿಯನ್ನು ಮಾಡುವದು ಅವಶ್ಯವಿದೆ. ಹಿಂದುಸ್ತಾನದಲ್ಲಿ ಕಚೇರಿಯಿರುವ ಬ್ರಿಟಿಶ ಹಾಗು ಪರರಾಷ್ಟ್ರ ಕಂಪನಿಗಳು ಮೊದಲು ದಕ್ಷಿಣ ಆಫ್ರಿಕೆಯನ್ನು ಬಿಟ್ಟು ಇತರ ದೇಶಗಳಿಗೆ ಸರಕು ಕಳಿಸಿ ಹಿಂದುಗಡೆ ಅವುಗಳನ್ನು ದರ್ಬಾನ ಕೇಪಟೌನಗಳಿಗೆ ಕಳಿಸದಂತೆ ನೋಡಿಕೊಳ್ಳಬೇಕು. ಇದರಂತೆ ಬ್ರಿಟಿಶ ಸಾಮ್ರಾಜ್ಯ ಇಲ್ಲವೆ ಸಂಯುಕ್ತ ಆಹಾರ ಮಂಡಳಕ್ಕೆ ಹೋದ ಹಿಂದಿ ಸರಕುಗಳು ದಕ್ಷಿಣ ಆಫ್ರಿಕೆಗೆ ಕಳಿಸಲ್ಪಡದಂತೆ ಚಕ್ರವರ್ತಿ ಸರಕಾರದಿಂದ ಆಶ್ವಾಸನವನ್ನು ಪಡೆಯಬೇಕು. ಕೊನೆಯಲ್ಲಿ ಅವರು ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರ ವಿಷಯವು ಸಂಯುಕ್ತ ರಾಷ್ಟ್ರ ಸಭೆಯ ವಿಷಯಪತ್ರದಲ್ಲಿರುವದರಿಂದ ಸಪ್ಟೆಂಬರ ೨ ಕ್ಕೆ ಹಿಂದುಸ್ತಾನದಲ್ಲೆಲ್ಲ ಈ ಸಂಬಂಧದಲ್ಲಿ ಮತಪ್ರದರ್ಶನ ನಡೆಯಬೇಕೆಂದು ವಿನಂತಿಸಿದ್ದಾರೆ.





ಕರ್ಮವೀರ ಹರಿಜನ ಪುರವಣಿ

# ಸಂಪುಗಳು

ನಾನು ಸಂಪಿಗೆ ಮಾನ್ಯತೆಯನ್ನು ಕೊಟ್ಟೆನೆಂಬ ವದಂತಿ ದೈನಿಕ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದು ನಿಜವಿರುವದಿಲ್ಲ. ಒಂದು ದಿವಸ ಓರ್ವ ಅಂಚೆ ಪೇದೆಯು ನನ್ನನ್ನು ಕಂಡು "ವಂದೇ ಮಾತರಂ" ಉಚ್ಚರಿಸಿ ಹೋಗುವ ಇಚ್ಛೆ ಪ್ರದರ್ಶಿಸಿದನು. ಕಾನೂ ಗಾಂಧಿಯವರು ಅವನನ್ನು ನನ್ನಲ್ಲಿ ಕರೆದುಕೊಂಡು ಬಂದರು. ಆದರೆ ಅವನು ಅದೇ ಪ್ರಾರಂಭವಾದ ಅಂಚೆ ಪೇದೆಗಳ ಸಂಪಿಗಾಗಿ ನನ್ನ ಆಶೀರ್ವಾದ ಕೋರಿದನು. ಸಂಪು ನ್ಯಾಯ್ಯವಾದುದಿದ್ದರೆ ಹಾಗು ಸಂಪೂರ್ಣ ಶಾಂತತೆಯಿಂದ ಸಾಗಿದರೆ ಯಶಸ್ಸು ಖಂಡಿತ ಎಂದು ನಾನು ಹೇಳಿದೆನು. [illegible] ಹೇಳಿದ ಮಾತ್ರಕ್ಕೆ ವಿಶಿಷ್ಟ ಸಂಪಿಗೆ ಮನ್ನಣೆ ಕೊಟ್ಟಂತೆ ಆಗಲಿಲ್ಲ. ಅಂಚೆ ಪೇದೆಗಳ ಸಂಪು ನ್ಯಾಯ್ಯವಾಗಿದೆಯೊ ಇಲ್ಲವೊ ಎಂಬುದನ್ನು ಬಿಟ್ಟರೂ ಸಂಪೂರ್ಣ ಶಾಂತ ಸ್ವರೂಪದ ಸಂಪುಗಳನ್ನು ಯಶಸ್ವಿಯಾಗಿ ಸಾಗಿಸಿಕೊಂಡು ಹೋಗುವಲ್ಲಿ ನಾನು ತಜ್ಞನಿರುವದರಿಂದ ಯಶಸ್ವಿ ಸಂಪುಗಳ ಕರಾರುಗಳನ್ನು ಈ ಮತ್ತು ಇತರ ಸಂಪುಗಳ ಸಂಚಾಲಕರ ಹಾಗು ಸಾರ್ವಜನಿಕರ ಮುಂದೆ ಇಡುವದು ನನ್ನ ಹೊಣೆಯೆ ಆಗಿರುವದು.

ನ್ಯಾಯಕ್ಕೆ ಅನುಸರಿಸಿ ಇರದ ಸಂಪು ಹೂಡತಕ್ಕದ್ದಲ್ಲ. ಅನ್ಯಾಯದ ಯಾವದೇ ಸಂಪು ಯಶಸ್ವಿಯಾಗಕೂಡದು. ಅಂಥ ಸಂಪುಗಳಿಗೆ ಸಹಾನುಭೂತಿಯನ್ನು ತೋರಿಸುವವನ್ನು ಬಿಡಬೇಕು.

ಸಾರ್ವಜನಿಕರ ವಿಶ್ವಾಸಕ್ಕೆ ಪಾತ್ರರಾದ ನಿಷ್ಪಕ್ಷಪಾತ ಜನರ ಬೆಂಬಲವಿಲ್ಲದ ಸಂಪಿನ ಗುಣಗಳನ್ನು ಪರೀಕ್ಷಿಸಲು ಸಾರ್ವಜನಿಕರಿಗೆ ಸಾಧನಗಳಿರುವದಿಲ್ಲ. ಸಂಬಂಧಿಸಿದ ಜನರು ತಮ್ಮದನ್ನು ತಾವೇ ನಿರ್ಣಯಿಸಿ ಹೇಳಲಾರರು. ಆದುದರಿಂದ ಪಕ್ಷಗಳಿಗೆ ಗ್ರಾಹ್ಯವಾದ ಪಂಚಾಯತಿ ಅಥವಾ ನ್ಯಾಯ ಮಂಡಳ ಮಧ್ಯಸ್ಥಿ ಇರಬೇಕು. ಗ್ರಾಹ್ಯವಾದ ಪಂಚಾಯತಿ ಅಥವಾ ಮಧ್ಯಸ್ಥಿ ಇದ್ದಾಗ ಆ ವಿಷಯವು ಸಾರ್ವಜನಿಕರ ಮುಂದೆ ಬರುವದೇ ಇಲ್ಲ. [illegible] ದುರಾಗ್ರಹಿ ಕೆಲಸಗಾರರು ಪಂಚಾಯತಿ ನಿರ್ಣಯಗಳನ್ನು ಅಲಕ್ಷಿಸಿದ ಅಥವಾ ತಮ್ಮ ಶಕ್ತಿಯ ಭರವಸೆಯಿದ್ದ ಕೆಲಸಗಾರರು ತಪ್ಪು ಹಾದಿ ಹಿಡಿದು ಆ ರೀತಿ ಮಾಡಿ ಒತ್ತಾಯದಿಂದ ಬೇಡಿಕೆಗಳನ್ನು ಪೂರೈಸಿಕೊಳ್ಳಲು ನಿರ್ಧರಿಸಿದ ಪ್ರಕಾರಗಳು ಸಂಭವಿಸಿರುವವು.

ಆರ್ಥಿಕ ಪರಿಹಾರದ ಸಂಪುಗಳ ಒಳ ಉದ್ದೇಶವು ರಾಜಕೀಯವಿರತಕ್ಕದ್ದಲ್ಲ. ಈ ತರದ ಸಮ್ಮಿಶ್ರಣದಿಂದ ರಾಜಕೀಯ ಗುರಿಯು ಸಾಧಿಸದು ಮತ್ತು ಸಾಮಾನ್ಯವಾಗಿ ಅದು ಸಂಪುಗಾರರಿಗೇ ತೊಂದರೆಯುಂಟು ಮಾಡುವದು. ಅಂಚೆ ಸಂಪಿನಂಥ ಸಾರ್ವಜನಿಕೋಪಯೋಗಿ ಖಾತೆಗೆ ಅವು ಸಂಬಂಧಿಸಿ ಸಾರ್ವಜನಿಕ ಜೀವನವನ್ನು ಅಸ್ತವ್ಯಸ್ತಗೊಳಿಸದಿದ್ದರೂ ಹೀಗಾಗುವದು. ಸರಕಾರಕ್ಕೂ ಕೆಲವು ಅನಾನುಕೂಲತೆಯುಂಟಾಗಬಹುದು. ಆದರೆ ಅದು ಸ್ಥಗಿತವಾಗುವದಿಲ್ಲ. ಶ್ರೀಮಂತ ಜನರು ಖರ್ಚಿನ ಅಂಚೆ ಸರ್ವಿಸಗಳನ್ನು ನಿರ್ಮಿಸಿಕೊಳ್ಳುವರು. ಆದರೆ ಬಹುಜನ ಬಡವರು ಇಂಥ ಸಂಪಿನ ಸಮಯದಲ್ಲಿ ಅನೇಕ ವರ್ಷಗಳಿಂದ ರೂಢಿಯಾಗಿದ್ದ ಮೂಲ ಮಹತ್ವದ ಅನುಕೂಲತೆಗೆ ಎರವಾಗುವರು. ಇತರ ನ್ಯಾಯ್ಯವಾದ ಉಪಾಯಗಳನ್ನು ಕೈಕೊಂಡು ಅವು ಅಯಶಸ್ವಿಯಾದ ಮೇಲೆ ಇಂಥ ಸಂಪು ಹೂಡುವದು ಯೋಗ್ಯವಾಗುವದು. ಸದ್ಯಕ್ಕೆ ನಮ್ಮ ರಾಷ್ಟ್ರೀಯ ಪ್ರಾಂತಿಕ ಸರಕಾರಗಳು ಇರುವವು. ಅಂಚೆ ಪೇದೆಗಳು ಉಗ್ರ ಉಪಾಯ ಕೈಕೊಳ್ಳುವ ಮೊದಲು ಈ ಸರಕಾರಗಳ ಸಲಹೆಯನ್ನು ಕೇಳಬೇಕಿತ್ತು. ಈ ವರೆಗೆ ನನಗೆ ಗೊತ್ತಿದ್ದಂತೆ ಶ್ರೀ ಬಾಳಾಸಾಹೇಬ ಖೇರ, ಶ್ರೀ ಮಂಗಲದಾಸ ಪಕ್ವಾಸಾ, ಹಾಗು ಸರದಾರ ವಲ್ಲಭಭಾಯಿಯವರು ಕೈಕಾಕಿರುವರು. ಅವರ ಸಲಹೆಯನ್ನು ಪೇದೆಗಳು ನಿರಾಕರಿಸಿದ್ದರೆ ಅವರು ಗಂಡಾಂತರದ ಹಾದಿಯನ್ನು ಹಿಡಿದಿರುವರೆಂದೇ ಎನ್ನಬೇಕಾಗುವದು. ಈ ಯಾವತ್ತು ಬಲಿಷ್ಠ ಸಂಘಗಳು ತಮ್ಮ ಸ್ವಕೀಯ ಸರಕಾರಗಳನ್ನು ಹಾಗು ಕಾರ್ಯಕಾರಿ ಸಮಿತಿ (ವರ್ಕಿಂಗ ಕಮಿಟಿ) ಸಭಾಸದರನ್ನು ಅಲಕ್ಷಿಸಿದಲ್ಲಿ ಕಾಂಗ್ರೆಸ್ಸ ತಮ್ಮದಲ್ಲವೆಂದು ಹೇಳಿದಂತೆಯೆ ಆಗುವದು. ಕಾಂಗ್ರೆಸ್ಸು ಅವರ ಹಿತವನ್ನು ಮಾಡಿದ್ದಾದರೆ ಅವರಿಗೆ ಹೀಗೆ ಹಕ್ಕುಂಟು.

ಸಂತ್ರಸ್ತ ಜನರು ತಮಗೆ ಸಾಧ್ಯವಿದ್ದ ಎಲ್ಲ ನ್ಯಾಯ್ಯವಾದ ಉಪಾಯಗಳನ್ನು ಮುಗಿಸಿರದ್ದು ಸಿದ್ಧವಾಗುವ ವರೆಗೆ, ಕಾಂಗ್ರೆಸ್ಸು ಅವರ ಹಿತವನ್ನು ಅಲಕ್ಷಿಸಿರುವದು. ಅಥವಾ ಅವ ವಿಶ್ವಾಸದ್ರೋಹವನ್ನು ಬಗೆದಿರುವದು ಎಂಬುದು ಕಂಡು ಬಂದ ವರೆಗೆ ಇಲ್ಲವೆ ದುರಾಗ್ರಹಿ ಹಾಗು ಅನುದಾರ ಅಧಿಕಾರಿಗಳಿಂದ ನ್ಯಾಯ ಸಂಪಾದಿಸಿಕೊಳ್ಳಲು ಕಾಂಗ್ರೆಸ್ಸು ಸಹಾನುಭೂತಿಪರ ಸಂಪುಗಳನ್ನು ಹೂಡಲು ತಿಳಿಸುವ ವರೆಗೆ ಸಹಾನುಭೂತಿಪರ ಸಂಪುಗಳು ಅರ್ಥವಿಲ್ಲದ್ದಾಗುವವು.

ಸರಕಾರವನ್ನು ವಿಧ್ವಂಸಗೊಳಿಸಲು ಈಗ ದೇಶದಲ್ಲೆಲ್ಲ ಸಂಪುಗಳ ಮಾತು ಕೇಳಬರುತ್ತದೆ. ಈ ವಿಧ್ವಂಸನವು ರಾಜಕೀಯ ಹೆಜ್ಜೆಯಲ್ಲಿ ಕೊಯದಿರುವದಲ್ಲದೆ ಕಾಂಗ್ರೆಸ್ಸಿನಂಥ ಸಂಸ್ಥೆಗೇ ವಿಷಯವಿರುವದು. ಯೂನಿಯನಗಳು ಎಷ್ಟೇ ಬಲಿಷ್ಠವಾಗಿದ್ದರೂ ಅವುಗಳಿಗೆ ಯುಕ್ತವಿಲ್ಲ. ಸ್ವಾತಂತ್ರ್ಯ ಸಂಪಾದಿಸಿಕೊಳ್ಳುವಲ್ಲಿ ಕಾಂಗ್ರೆಸ್ಸು ಹೆಚ್ಚಿನ ಶಕ್ತಿಯ ಜನತಾ ಆಯುಧವಾಗಿದ್ದರೆ ವಿಧ್ವಂಸ ಕಾರ್ಯವನ್ನು ಕಾಂಗ್ರೆಸ್ಸಿನ ಕೈಗೇ ಬಿಟ್ಟು ಕೊಡಬೇಕು.

ಸದ್ಯಕ್ಕೆ ಕಾಂಗ್ರೆಸು ಭಾವೀ ಘಟನಾ ಸಮಿತಿಯನ್ನು ಯಶಸ್ವಿಯನ್ನಾಗಿ ಮಾಡಲು ನಿರತವಾದೆ. ಹಾದಿಯಲ್ಲಿ ಅಂತರಿಕ ಅಡಚಣೆಗಳುಂಟು. ವಿಧ್ವಂಸಕ ಸಂಪುಗಳು ಕಾಂಗ್ರೆಸ ಸರಕಾರಕ್ಕೆ ವಿಘ್ನವನ್ನುಂಟುಮಾಡುವವು.

ರಾಜಕೀಯ ಸಂಪುಗಳನ್ನು ಅವುಗಳ ಗುಣಗಳಿಂದ ಪರೀಕ್ಷಿಸಬೇಕೆಂದೂ ಅವುಗಳನ್ನು ಆರ್ಥಿಕ ಸಂಪುಗಳಲ್ಲಿ ಕೂಡಿಸಬಾರದೆಂದೂ ಸಂಬಂಧಿಸಬಾರದೆಂದೂ ಮೇಲಿನ ವಿವೇಚನೆಯಿಂದ ಸಿದ್ಧವಾಗುವದು. ಅಹಿಂಸಾತ್ಮಕ ಹೋರಾಟದಲ್ಲಿ ರಾಜಕೀಯ ಸಂಪುಗಳಿಗೆ ನಿರ್ದಿಷ್ಟ ಸ್ಥಾನವುಂಟು. ಅವು ಎಂದೂ ಆಕಸ್ಮಿಕವಾಗಿ ಪ್ರಾರಂಭವಾಗುವದಿಲ್ಲ. ಅವು ಬಹಿರಂಗವಾಗಿರಬೇಕು. ಮತ್ತು ಗುಂಡರು ಅವುಗಳ ಧುರೀಣರಿರತಕ್ಕದ್ದಲ್ಲ. ಅವು ಯಾವ ಕಾಲಕ್ಕೂ ಹಿಂಸೆಗೆ ಎಳಸತಕ್ಕದ್ದಲ್ಲ.

ಆದ್ದರಿಂದ ಎಲ್ಲ ಸಂಪುಗಾರರಿಗೆ ಪಂಚಾಯಿತಿಗೆ ಅಥವಾ ಮಧ್ಯಸ್ಥಿಗೆ ಒಪ್ಪುವ ಸ್ಪಷ್ಟ ಘೋಷಣೆ ಮಾಡಲಿಕ್ಕೂ ಕಾಂಗ್ರೆಸ್ಸಿನ ಮಾರ್ಗದರ್ಶನ ಕೋರಿ ಅದರ ಸಲಹೆಯಂತೆ ನಡೆಯಲಿಕ್ಕೂ ನನ್ನ ನಮ್ರ ಸೂಚನೆಯಿದೆ. ಇದರಂತೆ ಸಹಾನುಭೂತಿಪರ ಎಲ್ಲ ಸಂಪುಗಾರರು, ಕಾಂಗ್ರೆಸ್ಸು ಭಾವೀ ಘಟನಾ ಸಮಿತಿಯನ್ನು ಯಶಸ್ವಿ ಮಾಡಲು ನಿರತವಾದಾಗ ಹಾಗು ಪ್ರಾಂತಿಕ ರಾಷ್ಟ್ರೀಯ ಸರಕಾರಗಳು ಅಧಿಕಾರದಲ್ಲಿರುವಾಗ ಸಂಪು ಹೂಡುವದನ್ನು ತಡೆಯಬೇಕೆಂದು ಸೂಚಿಸಬಯಸುತ್ತೇನೆ.

ಪುಣೆ — ಮೋ. ಕ. ಗಾಂಧಿ

೪—೮—೪೬

# ಖಾದೀ ಕಾರ್ಯಕರ್ತರು

ಖಾದಿ ಕಾರ್ಯಕರ್ತರ ಸಂಬಂಧದಲ್ಲಿ ಎರಡು ಪ್ರಶ್ನೆ ನನ್ನ ಮುಂದಿವೆ. ಹಳ್ಳಿ ಕಾರ್ಯಕರ್ತರಿಗೆ ಸಂಬಂಧಿಸಿದುದು ಮೊದಲನೆಯದು. ಸ್ವತಃ ನೂಲು ತೆಗೆದು ಎರಡನೆಯವರಿಗೆ ನೂಲತೆಗೆಯುವುದನ್ನು ಕಲಿಸುವದರಲ್ಲಿ ತಮ್ಮ ವೇಳೆ ಕಳೆವುದು ಅವರ ಕರ್ತವ್ಯ. ಹತ್ತಿಕಾಳನ್ನು ಬಿತ್ತುವುದನ್ನು ಪ್ರಾರಂಭಿಸಿಕೊಂಡು ಬಟ್ಟೆ ನೇಯುವ ವರೆಗಿನ ಎಲ್ಲ ವಿಧಾನಗಳು ಖಾದಿಯ ಹೊಸ ಯೋಜನೆಯಲ್ಲಿ ಅಡಕವಾಗುವವು. ಜಾಣತನದಿಂದ ಇವೆಲ್ಲ ವಿಧಾನಗಳನ್ನು ಮಾಡುವ ಮತ್ತು ರಾಟೆಯನ್ನು ಹಾಗೂ ಕದರನ್ನು ಸರಿಪಡಿಸಿಕೊಂಡು ಕೆಲಸಮಾಡುವ ಕಾರ್ಯಕರ್ತನಿಗೆ ತನ್ನ ಉಪಜೀವನ ಸಾಗಿಸಲು ಮತ್ತು ಎರಡನೆಯವರಿಗೆ ಹಾಗೆ ಮಾಡಲು ಕಲಿಸುವಲ್ಲಿಯೂ ಯಾವದೇ ಬಗೆಯ ಅಡಚಣೆ ಬರಬಾರದು. ಇದರ ಜತೆಯಲ್ಲಿಯೇ ಮತ್ತು ಖಾದೀ ಕಾರ್ಯಕ್ಕೆ ನ್ಯೂನ್ಯತೆ ಬಾರದಂತೆ ಆ ಕಾರ್ಯಕರ್ತರು ಚಿಲ್ಲರೆ ಬೇನೆಗಳಿಗೆ ಔಷಧೋಪಚಾರ ಮಾಡಬೇಕು. ಮತ್ತು ಹಳ್ಳಿಯ ಸ್ವಚ್ಛತೆಯನ್ನು ನೋಡಿಕೊಳ್ಳಬೇಕು. ವ್ಯವಸಾಯ ಮೂಲಕ ಶಿಕ್ಷಣ ಕೊಡಬೇಕು. ಆದುದರಿಂದ ಶಿಕ್ಷಣ, ಖಾದೀ ಕೆಲಸದ ಹೊರಗಿನದೆಂದು ಎನಿಸಲಾರದು. ಶಿಕ್ಷಣಕ್ಕೆಂದು ಬರುವವರೆಲ್ಲ ಖಾದಿಯನ್ನೆ ಧರಿಸತಕ್ಕದ್ದು ಮತ್ತು ಖಾದಿ ಮುಖಾಂತರವೆ ಶಿಕ್ಷಣ ಪಡೆಯತಕ್ಕದ್ದು.

ಖಾದೀ ಕಾರ್ಯಕರ್ತ ಎಲ್ಲಿಯ ವರೆಗೆ ಸಂಬಳದ ಕಾರ್ಯಕರ್ತನೆಂದಿರಬೇಕೆಂಬುದು ಎರಡನೇ ಪ್ರಶ್ನೆ. ಅವನು ಪ್ರಾರಂಭದಿಂದಲೆ ಸ್ವಾವಲಂಬಿಯಾಗಿರಬೇಕೆಂದು ನನ್ನ ಅಭಿಪ್ರಾಯ. ಅದು ಶಕ್ಯವಿಲ್ಲದಿದ್ದರೆ ಅವನು ಅದಕ್ಕಾಗಿ ಇಂತಿಷ್ಟು ಅವಧಿಯನ್ನು ಗೊತ್ತು ಪಡಿಸಿಕೊಳ್ಳಬೇಕು. ನನ್ನ ಅಭಿಪ್ರಾಯದಂತೆ ಅಯಿದು ವರ್ಷಗಳ ಅವಧಿಯೆಂದರೆ ಪರಮಾವಧಿ. ಅಯಿದು ವರುಷಗಳ ನಂತರ ಒಮ್ಮೆಲೆ ಸ್ವಾವಲಂಬಿಯಾಗುವದು ಅವನಿಗೆ ಶಕ್ಯವಾಗಲಾರದು. ಅದೊಂದು ಬಗೆಯ ಕಲೆ. ಅದನ್ನು ದಕ್ಷತೆಯಿಂದ ಮತ್ತು ವ್ಯವಸ್ಥಿತ ರೀತಿಯಿಂದ ಸಾಧ್ಯಮಾಡಿಕೊಳ್ಳತಕ್ಕದ್ದು. ಎರಡನೆಯವರಿಗೆ ಯಾರು ನಿಜವಾಗಿ ಕಲಿಸುವರೊ ಅವರು ಮೊದಲು ತಾವು ಸ್ವಾವಲಂಬಿಗಳಾಗಬೇಕಾದುದು ಉಚಿತವಾಗಿದೆ.

ಪಂಚಗಣಿ — ಮೋ. ಕ. ಗಾಂಧಿ

೨೮-೭-೪೬

(ಹರಿಜನ ಬಂಧುವಿನಿಂದ)

# ವಿಕೇಂದ್ರೀಕರಣ

ಔಂಧ ಸಂಸ್ಥಾನದ ಅಪ್ಪಾಸಾಹೇಬ ಪಂತರು ಬರೆಯುತ್ತಾರೆ.

"ಈ ದೇಶದಲ್ಲಿ ತಮ್ಮ ಪ್ರಸ್ಥವನ್ನು ಬೆಳೆಸಿಕೊಳ್ಳುವುದಕ್ಕಾಗಿ ಬ್ರಿಟಿಶ್‌ರು 'ಸರ್ವಿಸಿಸ್' (ಆಯ. ಸಿ. ಎಸ್. ಅಧಿಕಾರಿಗಳ) ಗಳ ಯೋಗ್ಯ ಸಾಧನವನ್ನು ಕಲ್ಪಿಸಿಕೊಂಡಿರುವರು. ಒಂದು ಬಗೆಯ ಶಾಂತತೆ ಮತ್ತು ಸುವ್ಯವಸ್ಥೆಯನ್ನು ಕಾಯ್ದುಕೊಳ್ಳಲು ವಿಶೇಷತಃ 'ಸ್ಮಶಾನ ಶಾಂತತೆ' ಯನ್ನು ರಕ್ಷಿಸಲು ಆ ಸಾಧನವನ್ನು ಸಾಕಷ್ಟು ಪ್ರಮಾಣದಲ್ಲಿ ಉಪಯೋಗ ಮಾಡಿಕೊಳ್ಳುತಿರುವರು.

"ಆದರೆ ನಮ್ಮ ನಿಜವಾದ ಪ್ರಜಾಪ್ರಭುತ್ವದ ಬೆಳವಣಿಗೆಗೆ ಈ ಸಾಧನವು ಸಹಾಯಕವಾಗದೆ ಮತ್ತಷ್ಟು ಪ್ರತಿಬಂಧಕವಾಗುತ್ತದೆಂಬುದು ಪ್ರತಿಯೊಬ್ಬರಿಗೆ ಅನಿಸುತ್ತದೆ. ನಾವು ಈ ಹಳೆಯ ಯಂತ್ರವನ್ನೆಲ್ಲ ಬಿಟ್ಟುಗೊಟ್ಟು ಸ್ವಾನುಭವದಿಂದ ಹೊಸತನ್ನು ಕಲ್ಪಿಸಿಕೊಳ್ಳಬೇಕು. ಅದರ ಸಹಾಯದಿಂದ ಸಮಾನ ಮತ್ತು ಪ್ರಜಾಪ್ರಭುತ್ವದ ಜೀವನ ಪಥವನ್ನು ಸಾಗಿಸಬೇಕು.

"ಈ ಉದ್ದೇಶ ಸಾಧಿಸಬೇಕಾದರೆ ಆಡಳಿತಾಧಿಕಾರದಲ್ಲಿ ವಿಕೇಂದ್ರೀಕರಣವನ್ನು ಕಲ್ಪಿಸುವದು ಮೊದಲನೆ ಹೆಜ್ಜೆಯೆಂದೆನಿಸುತ್ತದೆ. ಜನತೆ ತಾನೇ ಹೊಣೆಗಾರಿಕೆಯನ್ನು ನಿರ್ವಹಿಸಿಕೊಂಡಷ್ಟು ಮಾನವ ಗೌರವ ಮತ್ತು ಸ್ವಾವಲಂಬನದ ಸ್ವಾದು ಭಾರವಾಗುವದು.

"ನಮ್ಮ ಸಂರಕ್ಷಣೆ, ನ್ಯಾಯದಾನ, ಆಹಾರ, ಬಟ್ಟೆ ಮೊದಲಾದವುಗಳಿಗಾಗಿ ಕೇಂದ್ರ ಅಧಿಕಾರಿಗಳನ್ನವಲಂಬಿಸುವದು ಮೊದಲಾದ್ದನ್ನೆಲ್ಲ ನಾವು ಬಿಟ್ಟುಗೊಡಲಿಕ್ಕೆ ಬೇಕು. ನಿಜವಾದ ಪ್ರಜಾಪ್ರಭುತ್ವ ಹೊರಹೊಮ್ಮಬೇಕಾದರೆ ಇದೆಲ್ಲ ಅತ್ಯವಶ್ಯ. ಮಾನವನ ಸಂಬಂಧದಲ್ಲಿನ ನೈತಿಕ ತತ್ವಗಳ ಮಹತ್ವವನ್ನು ನಾವು ತಪ್ಪುಮಾಡುತ್ತ ಮತ್ತು ಕಷ್ಟ ಸಹಿಸುತ್ತಲೆ ಕಲಿಯುವೆವು.

"ಅಧಿಕಾರ ಮತ್ತು ಶಕ್ತಿಯ ಕೇಂದ್ರೀಕರಣದಿಂದ ಸರ್ವಾಧಿಕಾರಿತ್ವವು ಮತ್ತು ಮಾನವ ದಾಸ್ಯವು ಪ್ರಸ್ಥಾಪಿತವಾಗುತ್ತವೆ. ಕಾಂಗ್ರೆಸ್ ಮಂತ್ರಿಮಂಡಳಗಳಿಗೆ ಈ ಕೇಂದ್ರೀಕೃತ ಅಧಿಕಾರ ಈಗ ದೊರೆತಿದೆ. ಅದರ ಉಪಯೋಗವನ್ನು ವಿಕೇಂದ್ರೀಕರಣದ ಮಾರ್ಗವನ್ನು ಹುಡುಕುವಲ್ಲಿ ಮಾಡಿಕೊಳ್ಳುವದೆ ಯೋಗ್ಯ ಒರೆಗಲ್ಲಾಗಿದೆ. ಈ ವಿಕೇಂದ್ರೀಕರಣದಿಂದ ಸಾಮಾನ್ಯ ಮಾನವರಿಗೆ ಕೂಡ ತಮ್ಮ ಕಾರ್ಯಕಲಾಪಗಳನ್ನು ತಾವೇ ಸಾಗಿಸಿಕೊಳ್ಳಲನುವಾಗುವದು. ಮತ್ತು ಆ ಪದ್ಧತಿ ಹೆಚ್ಚು ಮಾನವೀಯ ಮತ್ತು ಉತ್ಪಾದಕವಾಗುವದು. ಅದರಿಂದ ಹೆಚ್ಚು ಸುಖವಾಗುವದು."

ಔಂಧದ ಆಡಳಿತದಲ್ಲಿ ಸ್ವತಃ ಬಹಳಮಟ್ಟಿಗೆ ಭಾಗವಹಿಸಿ ಅನುಭವ ಪಡೆದು ಅಪ್ಪಾಸಾಹೇಬರು ಇದನ್ನು ಬರೆಯುತ್ತಾರೆ.

ಪುಣೆ — ಮೋ. ಕ. ಗಾಂಧಿ

೩೦-೭-೧೯೪೬

# ದಕ್ಷಿಣ-ಆಫ್ರಿಕೆ

ದಕ್ಷಿಣ ಆಫ್ರಿಕೆಯಿಂದ ಬಂದ ಕೆಳಗಿನ ಸುದ್ದಿ ವಾಚಕರಿಗೆ ಮನೋರಂಜಕವಾಗುವದು.

ಹಿಂದೀಯರು ಅಲ್ಲಿ ಹೂಡಿದ ಹೋರಾಟದಲ್ಲಿ ಧುಮುಕಿದ ಮಾಯ್ಕೆಲ್ ಸ್ಕಾಟ್ ಇವರು 'ಬಲದಿಂದಲ್ಲ' ಎಂಬ ಶಿರೋಲೇಖದಲ್ಲಿ ಒಂದು ಟಿಪ್ಪಣಿಯನ್ನು ಬರೆದಿರುವರು. ದೈನಿಕ ಪತ್ರಗಳಲ್ಲಿ ಈಗಾಗಲೆ ಅದು ಪ್ರಸಿದ್ಧವಾಗಿದೆ. ಯುರೋಪಿಯನ್‌ರಿಗೆಲ್ಲ ಅದು ವಿಶಿಷ್ಟ ಬಿನ್ನಹ ಮಾಡಿಕೊಳ್ಳುವುದು. ಅವರು ವೈಯಕ್ತಿಕವಾಗಿ ತಮ್ಮ ಟಿಪ್ಪಣಿಯನ್ನು ಜೋಡಿಸುತ್ತಾರೆ.

"ನಿಮ್ಮಲ್ಲಿ ಮತ್ತು ನಿಮ್ಮ ಚಳವಳಿಯಲ್ಲಿ ಉಂಟಾದ ಜಾಗ್ರತೆಯನ್ನು ನಿಮ್ಮ ವಿರುದ್ಧ ಈಗ ಉಪಯೋಗಿಸಲಾಗುತಿರುವ ಬಲಿಷ್ಠ ಮತ್ತು ಧೂರ್ತ ಶಕ್ತಿಗಳು ನೊಂದಿಸಲಾರವು"

ದರ್ಬಾನದಿಂದ ಇಂಗ್ಲಿಶ್ ಭಗಿನಿಯೊಬ್ಬಳು ಬರೆಯುತ್ತಾಳೆ.

ಶಿಬಿರದಲ್ಲಿಯ ಜನರಿಗೆ ಪ್ರೋತ್ಸಾಹನೆ ಕೊಡುವುದಕ್ಕಾಗಿ ನಾನು ಮೊದಲನೇ ದಿನವೇ ಶಿಬಿರಕ್ಕೆ ಹೋದೆನು. ಅವರಲ್ಲಿದ್ದ ಉತ್ಸಾಹ ಮತ್ತು ಸಾಮ್ಯಾನ ನಿಲುವೆಯನ್ನು ನೋಡಿ ನನಗೊಳ್ಳೆ ಸಮಾಧಾನವೆನಿಸಿತು. ನಾನು ನೋಡಿದ ಹಲವು ಹಿಂದೀ ಚಳವಳಿಗಳಂತೆ ಅದು ನಿಜ ಚಳವಳಿಯೆನಿಸಿತು. ಅನಂತರ ಒಂದು ದಿನ ನಾನು ಕೋರ್ಟಿಗೂ ಹೋಗಿದ್ದೆನು. ಅಲ್ಲಿ ಯಾರ ಮೇಲೆ ಖಟ್ಲೆ ನಡೆದಿದ್ದಿತೋ ಅವರೆ ನ್ಯಾಯಾಧೀಶರಂತೆ ಮತ್ತು ಅಧಿಕಾರಿಗಳು ಹಾಗು ಸರಕಾರವು ಕೈದಿಗಳ ಸ್ಥಳದಲ್ಲಿದ್ದಂತೆ ತೋರಿತು. ಧುರೀಣರಲ್ಲಿಯ ಹಲವರು ಜಬಾನಿಗಳನ್ನು ನೀವು ಓದಿದ್ದರೆ ಅವುಗಳಿಂದಲೂ ಇದೇ ಬಗೆಯ ಭಾವನೆ ನಿಮ್ಮಲ್ಲುಂಟಾಗುವುದು—

"ರೆ. ಮಾಯ್ಕೆಲ್ ಸ್ಕಾಟನು ಒಳ್ಳೆ ಸಂಭಾವಿತ ಮನುಷ್ಯ. ಅವರ ವಯಸ್ಸು ಕೇವಲ ೪೦. ಅನೇಕ ಪ್ರತಿಷ್ಠಿತ ಇಂಗ್ಲಿಶ್‌ರಂತೆ ಅವರು ಕಟಿಚಗಳನ್ನು ಧರಿಸುವರು. 'ಫಾದರಸ್ಕಾಟ' ಎಂದೇ ಅವರನ್ನು ಕರೆಯಲಾಗುತ್ತದೆ. ಅವರನ್ನು ನೋಡಿದರೆ ನನಗೆ ಸಿ. ಎಫ್ ಅಂಡ್ರ್ಯೂಜರ ನೆನಪಾಗುತ್ತದೆ.

—೯ ನೇ ಜುಲೈ

# ಕಾಂಗ್ರೆಸ್ ಮಂತ್ರಿಮಂಡಲಗಳೂ ಮೂಲ ಶಿಕ್ಷಣವೂ

೧೯೩೯ ರಲ್ಲಿ ಏಳು ಪ್ರಾಂತಗಳ ಕಾಂಗ್ರೆಸ್ ಮಂತ್ರಿಗಳು ರಾಜೀನಾಮೆ ಕೊಟ್ಟ ನಂತರ ಅಸ್ತಿತ್ವಕ್ಕೆ ಬಂದ ೯೩ನೆಯ ಕಲಮಿನ ಸರಕಾರಗಳು ಕೈಕೊಂಡ ವಿಘಾತಕ ಕ್ರಿಯೆಗಳಲ್ಲಿ ಕಾಂಗ್ರೆಸ್ ಮಂತ್ರಿ ಮಂಡಲಗಳು ಪ್ರಾರಂಭಿಸಿದ್ದ ಮೂಲ ಶಿಕ್ಷಣ ಯೋಜನೆ, ಪಾನನಿರೋಧ, ಗ್ರಾಮೋದ್ಧಾರ ಮತ್ತು ಗ್ರಾಮ ಕೈಗಾರಿಕೆಗಳ ಪುನರುಜ್ಜೀವನ ಈ ಯೋಜನೆಗಳನ್ನು ಕಿತ್ತೊಗೆದುದಕ್ಕಿಂತ ದೊಡ್ಡದು ಬೇರೊಂದಿಲ್ಲ. ಅದ್ದರಿಂದ ಕಾಂಗ್ರೆಸ್ ಮಂತ್ರಿ ಮಂಡಲಗಳು ಪುನಃ ಅಧಿಕಾರಕ್ಕೆ ಬಂದಾಗ ತಾವು ಹಿಂದೆ ನಡೆಸಿದ್ದ ಪ್ರಯೋಗಗಳಲ್ಲಿ ಅಳಿದುಳಿದನ್ನು ವ್ಯವಸ್ಥಿತಗೊಳಿಸುವದೂ ತಾವು ಹಿಂದೆ ಬಿಟ್ಟು ಹೋದಲ್ಲಿಂದ ತಮ್ಮ ಯೋಜನೆಗಳ ಹರಿದ ಸೂತ್ರಗಳನ್ನು ಜೋಡಿಸುವದೂ ಅವುಗಳ ಮೊದಲನೆ ಪ್ರಸಕ್ತಿಯಾದುದು ಸ್ವಾಭಾವಿಕವೇ ಆಗಿದೆ.

ಇದಕ್ಕೋಸ್ಕರ ಕಾಂಗ್ರೆಸ್ ಪ್ರಾಂತಗಳ ಶಿಕ್ಷಣ ಮಂತ್ರಿಗಳು ಶ್ರೀ ಬಾಳಾಸಾಹೇಬ ಖೇರರ ಆಮಂತ್ರಣದ ಮೇರೆಗೆ ಅವರ ಅಧ್ಯಕ್ಷತೆಯಲ್ಲಿ ಪುಣೆಯ ಕೌನ್ಸಿಲ ಭವನದಲ್ಲಿ ಇದೇ ತಿಂಗಳ ೨೯, ೩೦ ದಿನಾಂಕಗಳಲ್ಲಿ ಸಭೆ ಸೇರಿದರು. ಎಲ್ಲ ಪ್ರಾಂತಗಳ ಶಿಕ್ಷಣ ಮಂತ್ರಿಗಳಿಗೂ ಆಮಂತ್ರಣಗಳು ಹೋಗಿದ್ದವು. ಆದರೆ ಅವುಗಳಲ್ಲೆರಡರ ಮಂತ್ರಿಗಳಿಗೆ ಬರಲು ಸಾಧ್ಯವಾಗಲಿಲ್ಲ. ತಾ ೨೯ ಸಂಜೆ ಗಾಂಧೀಜಿ ಈ ಪರಿಷತ್ತಿನಲ್ಲಿ ಒಂದು ತಾಸಿಗಿಂತಲೂ ಹೆಚ್ಚು ಕಾಲ ಉಪಸ್ಥಿತರಾಗಿದ್ದರು. ಸರಕಾರದ ಮತ್ತು ಅದನ್ನು ಹೊಂದಿಕೊಂಡ ಸಂಸ್ಥೆಗಳಲ್ಲಿ ಮೂಲ ಶಿಕ್ಷಣದ ಯೋಜನೆಯ ಪ್ರಯೋಗಕ್ಕೆ ಹಿಂದೇಟು ಬಿದ್ದಿದ್ದರೂ ಗಾಂಧೀಜಿಯ ದೂರದೃಷ್ಟಿಯ ಫಲವಾಗಿ ಇಂಥ ಅವಸರಕ್ಕೆ ಸಿದ್ಧರಾಗಿಯೆ ಇದ್ದ ತಾಲಿಮಿ ಸಂಘದವರ ಆಶ್ರಯದಲ್ಲಿ ಅದು ಮುಂದೆ ಸಾಗಿಯೆ ಇತ್ತು. ಮೊದಲಿನ ಏಳು ವರ್ಷಗಳನ್ನು ಕಳೆದು ಮೂಲ ಶಿಕ್ಷಣವೀಗ ಪ್ರೌಢಾವಸ್ಥೆಗೆ ಬಂದಿದೆ. ೧೯೪೪ ರಲ್ಲಿ ಬಿಡುಗಡೆಯಾದ ನಂತರ ತಾಲಿಮಿ ಸಂಘದವರನ್ನು ಮೊದಲನೆ ಬಾರಿ ಭೆಟ್ಟಿಯಾದಾಗ ಮೂಲ ಶಿಕ್ಷಣದ ವ್ಯಾಪವನ್ನು ವಿಸ್ತರಿಸಬೇಕಾದ ಅವಸ್ಥೆಯೀಗ ಒದಗಿದೆಯೆಂದು ಗಾಂಧೀಜಿ ಅವರಿಗೆ ವಿವರಿಸಿದ್ದರು. ಪೂರ್ವ ಮೂಲ ಶಿಕ್ಷಣ ಮತ್ತು ಅಪರ ಮೂಲ ಶಿಕ್ಷಣ ತರಬೇತಿಯನ್ನೂ ಅವರ. ತಮ್ಮ ಪರಿಧಿಯಲ್ಲಿ ಸೇರಿಸಿಕೊಳ್ಳಬೇಕಾಗಿದೆಯೆಂದು ಗಾಂಧೀಜಿಯವರ ಮತವಾಗಿತ್ತು, ಮೂಲ ಶಿಕ್ಷಣವೆಂಬುದು ಅಕ್ಷರಶಃ ಜೀವನ ಶಿಕ್ಷಣವಾಗಬೇಕಾಗಿದೆ. ಈ ಬಿಂದುವಿನಿಂದ ತಮ್ಮ ವಾದವನ್ನು ಮುಂದುವರಿಸುತ್ತ ಗಾಂಧೀಜಿ ಶಿಕ್ಷಣ ಮಂತ್ರಿ ಪರಿಷತ್ತಿನಲ್ಲಿ ಭಾಷಣ ಮಾಡಿ, ವಿಸ್ತರಣೆ ಯಾವ ರೀತಿಯಲ್ಲಿ ಸಾಗಬೇಕು ಮತ್ತು ಈ ವಿಷಯದಲ್ಲಿ ಮಂತ್ರಿಗಳ ಕರ್ತವ್ಯವೇನು ಎಂಬ ಬಗೆಗೆ ತಮ್ಮ ಅಭಿಪ್ರಾಯವನ್ನು ವಿಶದಗೊಳಿಸಿದರು. ಅತ್ಯುತ್ಸಾಹದ ಭರದಲ್ಲಿ ಗಂಟಲಲ್ಲಿ ಇಳಿಯದಷ್ಟು ದೊಡ್ಡ ಕಡಬನ್ನು ನುಂಗಬಾರದೆಂದು ಚಿಂತಿಸುತಿದ್ದ ಡಾ. ಝಾಕೀರ ಹುಸೇನರ ಒಂದು ಪ್ರಶ್ನೆಗೆ ಉತ್ತರರೂಪವಾಗಿ ಅವರು ಮಾತಾಡಿದರು. ಅತಿರೇಕ ಮಹತ್ವಾಕಾಂಕ್ಷೆಯ ಯೋಜನೆಯನ್ನು ಮಾಡಿ ಅದನ್ನು ಕೃತಿಗಿಳಿಸಲು ಬೇಕಾದ ಸಾಧನ ಸಂಪತ್ತಿಯಿಲ್ಲದೆ ಹೋದರೆ ಅದು ಅಪಾಯಕರವಾದೀತು.

## "ನಾನು ಮಂತ್ರಿಯಾಗಿದ್ದರೆ"

ಏನು ಮಾಡಬೇಕೆಂಬುದು ತಮಗೆ ನಿಚ್ಚಳವಾಗಿ ಗೊತ್ತಿದೆ ಯಾದರೂ ಅದನ್ನು ಹೇಗೆ ಮಾಡಬಹುದೆಂಬುದು ಮಾತ್ರ ಅಷ್ಟು ಸರಿಯಾಗಿ ಗೊತ್ತಿಲ್ಲವೆಂದರು ಗಾಂಧೀಜಿ. ಈ ವರೆಗೆ ಮೊದಲೇ ಗುರುತಿಸಿ ಹಾಗೆ ಗೊತ್ತು ಪಡಿಸಿದ ಮಾರ್ಗವನ್ನು ನಾವು ಅನುಸರಿಸುತಿದ್ದೆವು ಆದರೆ ಇನ್ನು ಮುಂದೆ ಅರಣ್ಯದಲ್ಲಿ ದಾರಿ ಮಾಡುತ್ತ ಸಾಗಬೇಕಾಗಿದೆ. ಮುಂದಿನವ ತೊಡಕುಗಳು ತಮಗೆ ಚೆನ್ನಾಗಿ ಗೊತ್ತಿವೆಯೆಂದು ಗಾಂಧೀಜಿ ಹೇಳಿದರು. ಹಳೆಯ ಸಂಪ್ರದಾಯದಲ್ಲೆ ಬೆಳೆದುಬಂದವರಿಗೆ ಒಂದೇ ಹೊಡೆತಕ್ಕೆ ಬೇರೆ ದೆಸೆಯಲ್ಲಿ ಕಾಲಿಡುವದು ಸುಲಭವಲ್ಲ ತಾವು ಮಂತ್ರಿ ಪದವಿಯಲ್ಲಿದ್ದರೆ, ಸರಕಾರದ ಶೈಕ್ಷಣಿಕ ಚಟುವಟಿಕೆಗಳೆಲ್ಲ ಇನ್ನು ಮುಂದೆ ಮೂಲ ಶಿಕ್ಷಣದ ತಳಹದಿಯ ಮೇಲೆ ಸಾಗುವವೆಂದು ವಿಶಾಲವಾದ ನಿರ್ದೇಶವನ್ನು ಹೊರಡಿಸುತಿದ್ದೆವೆಂದು ಗಾಂಧೀಜಿ ನುಡಿದರು. ಅನೇಕ ಪ್ರಾಂತಗಳಲ್ಲಿ ವಯಸ್ಕ ಶಿಕ್ಷಣದ ಸತ್ರವನ್ನು ಪ್ರಾರಂಭಿಸಲಾಗಿದೆ. "ನನ್ನನ್ನು ಕೇಳಿದರೆ ವಯಸ್ಕ ಶಿಕ್ಷಣವನ್ನು ಕೂಡ ಯಾವುದೊಂದು ಮೂಲ ಕೈಗಾರಿಕೆಯ ಮೂಲಕವೇ ಸಾಗಿಸಬೇಕು. ನನ್ನ ಮತದಲ್ಲಿ, ಅರಳೆ ನೂಲುವದೂ ಅದಕ್ಕೆ ಸಂಬಂಧಿಸಿದ ಇತರ ಕೆಲಸಗಳೂ ಇವಕ್ಕೆ ಅತ್ಯುತ್ತಮ ಸಾಧನಗಳು. ಆದರೆ ಕೈಗಾರಿಕೆಯ ಆಯ್ಕೆಯನ್ನು ಸಂಬಂಧ ಪಟ್ಟ ಜನರಿಗೇ ಬಿಟ್ಟು ಬಿಡುವದೊಳಿತು. ಯಾವ ಕೈಗಾರಿಕೆಯಲ್ಲಿ ನಿಜವಾದ ಅಂತಸ್ಸತ್ವವಿದೆಯೋ ಅದೇ ಕೊನೆಗೆ ಉಳಿಯುವದೆಂದು ನನಗೆ ಪೂರ್ಣ ವಿಶ್ವಾಸವುಂಟು. ಸರಕಾರದ ಹೊಸ ಶೈಕ್ಷಣಿಕ ಧೋರಣೆಯ ಗುಣ, ಪ್ರಯೋಜನಗಳನ್ನು ಜನರಿಗೂ ಶಿಕ್ಷಕರಿಗೂ ಮನದಟ್ಟು ಮಾಡುವ ಕೆಲಸ ಇನಸ್ಪೆಕ್ಟರರೇ ಮೊದಲಾದ ವಿದ್ಯಾಖಾತೆಯ ಅಧಿಕಾರಿಗಳಿಗೆ ಸೇರಿದ್ದು, ಅವರ ಪ್ರಾಥಮಿಕ ಕರ್ತವ್ಯವಲ್ಲದೆ ಜನರ ಮೇಲೂ ಶಿಕ್ಷಕರ ಮೇಲೂ ಸವಾರಿ ಮಾಡುವದಲ್ಲ. ಅವರಿಗೆ ಅದರಲ್ಲಿ ವಿಶ್ವಾಸವಿಲ್ಲದಿದ್ದರೆ, ಅಥವಾ ಹೊಸ ಧೋರಣೆಯನ್ನು ಪ್ರಾಮಾಣಿಕತೆಯಿಂದ ಕಾರ್ಯರೂಪಕ್ಕೆ ತರುವ ಇಚ್ಛೆಯಿಲ್ಲದಿದ್ದರೆ ರಾಜೀನಾಮೆ ಕೊಡಿರೆಂದು ನಾನು ಅವರಿಗೆ ಹೇಳೇನು, ಆದರೆ ಮಂತ್ರಿಗಳು ಕುಶಲರಾಗಿದ್ದರೆ, ಅವರು ಈ ಕಾರ್ಯದಲ್ಲಿ ತಾವೂ ಹೆಗಲು ಕೊಟ್ಟರೆ ಇಂಥ ಪ್ರಸಂಗವೊದಗಲಾರದೆಂದು ನನಗೆ ತೋರುತ್ತದೆ. ಬರಿ ಆಜ್ಞೆ ಹೊರಡಿಸಿ ಬಿಟ್ಟರೆ ಸಾಲದು," ಎಂದು ಗಾಂಧೀಜಿ ಹೇಳಿದರು.

## ವಿಶ್ವವಿದ್ಯಾಲಯ ಶಿಕ್ಷಣದ ಪುನರ್ವ್ಯವಸ್ಥೆ

ವಯಸ್ಕ ಶಿಕ್ಷಣವನ್ನು ಕುರಿತು ತಾವು ನುಡಿದುದು ವಿಶ್ವವಿದ್ಯಾಲಯ ಶಿಕ್ಷಣಕ್ಕೂ ಅಷ್ಟೇ ಅನ್ವಯಿಸುವದೆಂದು ಗಾಂಧೀಜಿ ಮುಂದುವರಿದರು. ಅದು ಹಿಂದುಸ್ತಾನದ ವಾತಾವರಣಕ್ಕೆ ಕೂಡಿಬರುವಂತಿರಬೇಕು. ಅದ್ದರಿಂದ ಅದು ಮೂಲ ಶಿಕ್ಷಣ ಕ್ರಮದ ವಿಸ್ತರಣೆಯೂ ಮುನ್ನಡೆಯೂ ಆಗಿರತಕ್ಕದ್ದು. ಅತ್ಯಂತ ಪ್ರಾಮುಖ್ಯ ವಿಷಯವಿದು. "ಈ ಸಂಗತಿಯಲ್ಲಿ ನನ್ನ ಅಭಿಪ್ರಾಯ ನಿಮಗೆ ಸರಿಯೇನಿಸದಿದ್ದರೆ ನನ್ನ ಸಲಹೆಯಿಂದ ನಿಮಗೇನೂ ಪ್ರಯೋಜನವಾಗಲಾರದು. ಬದಲಿಗೆ, ನನ್ನ ಅಭಿಪ್ರಾಯ ಸರಿಯೆಂದು ನಿಮಗೆ ತೋರಿದರೆ, ಮತ್ತು ನನ್ನಂತೆ ನಿಮಗೂ ಈಗಿನ ವಿಶ್ವವಿದ್ಯಾಲಯ ಶಿಕ್ಷಣ ಪದ್ಧತಿಯಿಂದ ನಾವು ಸ್ವಾತಂತ್ರ್ಯಕ್ಕೆ ಅರ್ಹರಾಗುವ ಬದಲು ಪಾರತಂತ್ರ್ಯಕ್ಕೆ ನಿಲುಕುತಿದ್ದೇವೆಂದು ಅನಿಸಿದರೆ ಆಗ ಈ ಪದ್ಧತಿಯನ್ನು ಬುಡಮುಟ್ಟ ಬದಲಿಸಿ ಅಥವಾ ಕೆಡಹಿ, ನಮ್ಮ ರಾಷ್ಟ್ರೀಯ ಅವಶ್ಯಕತೆಗೆ ಸರಿಹೋಗುವಂತೆ ಅದನ್ನು ಪುನರ್ ರೂಪಿಸಲು ನೀವು ಆತುರರಾಗದಿರಲಿಕ್ಕಿಲ್ಲ.

"ಇಂದು ನಮ್ಮ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಪಡೆದ ಯುವಕರು ಒಂದೇ ಸರಕಾರಿ ನೌಕರಿಗಳನ್ನು ಅರಸುತ್ತ ಓಡಾಡುತ್ತಾರೆ, ಇಲ್ಲವೆ ತಪ್ಪುದಾರಿ ಹಿಡಿದು ತಮ್ಮ ವಿಫಲ ಮನೋರಥವನ್ನು ಜನತೆಯಲ್ಲಿ ಅಶಾಂತಿಯನ್ನು ಉದ್ರೇಕಿಸುವ ಮೂಲಕ ಪ್ರದರ್ಶಿಸುತ್ತಾರೆ. ಬಿಕ್ಕೆ ಬೇಡಲು ಮತ್ತು ಪರೋಪಜೀವಿಗಳಾಗಿ ಬಾಳಲು ಕೂಡ ಅವರು ನಾಚುವದಿಲ್ಲ. ಹೀಗಿದೆ ಅವರ ಅವಸ್ಥೆ. ದೇಶದ-ಸ್ವಾತಂತ್ರ್ಯಕ್ಕಾಗಿ ಬಾಳಿ ಅದಕ್ಕಾಗಿಯೆ ಸಾಯಲು ಸಿದ್ಧರಾದ ನಿಜವಾದ ಜನಸೇವಕರನ್ನು ತಯಾರಿಸುವದೇ ವಿಶ್ವವಿದ್ಯಾಲಯ ಶಿಕ್ಷಣದ ಧ್ಯೇಯವಾಗಿರತಕ್ಕದ್ದು. ಆದುದರಿಂದ ತಾಲಿಮೀ ಸಂಘದಿಂದ ಶಿಕ್ಷಕರನ್ನು ತೆಗೆದುಕೊಂಡು ವಿಶ್ವವಿದ್ಯಾಲಯ ಶಿಕ್ಷಣವನ್ನು ಮೂಲಶಿಕ್ಷಣಕ್ಕೆ ತಗಲು ಹಾಕಿ ಅದಕ್ಕೆ ಹೊಂದಿಕೆಯಾಗುವಂತೆ ರೂಪಿಸುವದು ಅವಶ್ಯವೆಂದು ನನ್ನ ಅಭಿಮತ.

ಮಂತ್ರಿಗಳು ಜನತೆಯ ಪ್ರತಿನಿಧಿಗಳಾಗಿ ಅಧಿಕಾರವನ್ನು ವಹಿಸಿದ್ದಾರೆ. ಜನತೆಯನ್ನು ಬೆಂಬಲಕ್ಕೆ ತೆಗೆದುಕೊಳ್ಳದೆ ಹೋದರೆ ಅವರ ಆಜ್ಞೆ ಕೌನ್ಸಿಲ ಭವನದ ನಾಲ್ಕು ಗೋಡೆಗಳಿಂದಾಚೆಗೆ ಹೋಗಲಾರದು. ಇಂದು ಮುಂಬಯಿ, ಅಹಮದಾಬಾದುಗಳಲ್ಲಿ ಘಟಿಸುತ್ತಿರುವ ಸಂಗತಿಗಳು ಕಾಂಗ್ರೆಸ್ಸು ಜನತೆಯ ಮೇಲಿದ್ದ ತನ್ನ ಹಿಡಿತವನ್ನು ಕಳೆದು ಕೊಂಡಿದೆಯೆಂದು ಸೂಚಿಸುತಿದ್ದರೆ, ಅವು ಅವಲಕ್ಷಣಪ್ರಾಯವಾಗಿವೆ. ನಯೀ ತಾಲೀಮು ಅಥವಾ ಹೊಸ ಶಿಕ್ಷಣ ಪದ್ಧತಿ ಇನ್ನೂ ಎಳೆಯ ಕುಡಿಯಾಗಿದ್ದರೂ ಅದರ ಭವಿತವ್ಯ ಉಜ್ವಲವಾಗಿದೆ. ಜನತೆಯ ಬೆಂಬಲದ ಕೊರತೆಯಿದ್ದರೆ ಮಾತ್ರ ನಯೀ ತಾಲೀಮಿನ ಬೆಳವಣಿಗೆಯನ್ನು ಕೇವಲ ಮಂತ್ರಿಮಂಡಳದ ಆಜ್ಞಾಪತ್ರಗಳ ಮೂಲಕ ಒಂದೊತ್ತುವದು ಸರಿಯಾಗದ ಮಾತು. ಆದುಕಾರಣ, ಜನತೆಯ ಬೆಂಬಲವನ್ನು ಮಂತ್ರಿಗಳು ಸಂಪಾದಿಸಲಾರದೆ ಹೋದರೆ ಅವರು ರಾಜೀನಾಮೆ ಕೊಡುವದೊಳಿತು. ಅವರು ಅರಾಜಕತೆಗೆ ಭಯಪಡಬಾರದು. ತಮ್ಮ ಮನಸಿಗೆ ಹೊಳೆದಂತೆ ತಮ್ಮ ಕರ್ತವ್ಯವನ್ನು ಮಾಡಿ ಉಳಿದುದನ್ನು ದೇವರಿಗೆ ಬಿಟ್ಟು ಬಿಡುವದೇ ಉಚಿತ. ಆ ಅನುಭವದಿಂದಲೂ ಜನರು ನಿಜವಾದ ಸ್ವಾತಂತ್ರ್ಯದ ಪಾಠವನ್ನು ಕಲಿತಾರು, ಎಂದು ಗಾಂಧೀಜಿ ವಾದಿಸಿದರು.

ಆಮೇಲೆ ಅವರು ಪ್ರಶ್ನೆಗಳನ್ನು ಕೇಳಲು ಅವಕಾಶವಿತ್ತರು. ಮೊದಲನೆ ಪ್ರಶ್ನೆ ಹೀಗೆ ಬಂತು: ಮೂಲ ಶಿಕ್ಷಣವನ್ನು ಅದರ ಸ್ವಾವಲಂಬಿ ತಳಹದಿ ಬಿಟ್ಟು ಸಾಗಿಸಬಹುದೆ?"

"ಯಾಕಾಗದು?" ಎಂದರು ಗಾಂಧೀಜಿ. "ಆದರೆ ಅಂಥ ಪ್ರಸಂಗದಲ್ಲಿ ನೀವು ಮೂಲ ಶಿಕ್ಷಣವನ್ನು ಸರ್ವಥಾ ಮರೆತುಬಿಡಬಹುದೆಂದು ನಾನು ಅನುಮಾನಿಸುತ್ತೇನೆ. ಸ್ವಾವಲಂಬನೆಯೆಂಬುದು ಪ್ರಾಥಮಿಕ ಕರಾರಲ್ಲದಿದ್ದರೂ ನನ್ನ ಮಟ್ಟಿಗೆ ಅದು ಅಗ್ನಿಪರೀಕ್ಷೆಯಂತಿದೆ. ಅಂದಮಾತ್ರಕ್ಕೆ ಮೊದಲಿಂದಲೇ ಮೂಲಶಿಕ್ಷಣ ಸ್ವಾವಲಂಬಿಯಾಗುವದೆಂದು ನನ್ನ ಎಣಿಕೆಯಲ್ಲ. ಆದರೆ ಮೂಲಶಿಕ್ಷಣದ ಏಳು ವರ್ಷಗಳ ಅವಧಿಯನ್ನು ಒಟ್ಟಾಗಿ ಹಿಡಿದರೆ ಉತ್ಪನ್ನವೂ ವೆಚ್ಚವೂ ಬಾಯ್ಗೂಡಬೇಕು ಇಲ್ಲದಿದ್ದರೆ ಶಿಕ್ಷಣದ ಅಂತ್ಯದಲ್ಲಿ ಮೂಲಶಿಕ್ಷಣದ ವ್ಯಾಸಂಗದಿಂದ ವಿದ್ಯಾರ್ಥಿಗಳು ಜೀವನನಿರ್ವಾಹಕ್ಕೆ ಸಮರ್ಥರಾಗಿಲ್ಲವೆಂದಾಗುವದು. ಇದು ಮೂಲಶಿಕ್ಷಣವನ್ನೆ ನಿರರ್ಥಕವಾಗಿ ಮಾಡುತ್ತದೆ. ಈ ಪ್ರಕಾರ ಸ್ವಾವಲಂಬನೆಯ ತಳಹದಿ ಬಿಟ್ಟ ಮೂಲಶಿಕ್ಷಣ ಪ್ರಾಣರಹಿತ ದೇಹದಂತಾಗುವದು."

ಇತರ ಪ್ರಶ್ನೆಗಳೂ ಬಂದವು.

ಪ್ರಶ್ನೆ—ಯಾವುದೊಂದು ಮೂಲ ಕೈಗಾರಿಕೆಯ ಮುಖಾಂತರ ಶಿಕ್ಷಣಕೊಡುವ ತತ್ವವನ್ನು ನಾವು ಒಪ್ಪಿಕೊಳ್ಳುತ್ತೇವೆ. ಆದರೆ ಏಕೊ ಏನೊ ಮುಸ್ಲಿಮರು ಚರಕಾಕ್ಕೆ ವಿರುದ್ಧ ವಾಗಿದ್ದಾರೆ ಚರಕಾಕ್ಕೆ ನೀವು ಕೊಟ್ಟ ಮಹತ್ವ ಹತ್ತಿ ಬೆಳೆಯುವ ಪ್ರದೇಶಗಳಿಗೆ ಸರಿಹೋಗುತ್ತದೆ. ಆದರೆ ಹತ್ತಿ ಬೆಳೆಯದೆ ಇರುವ ಪ್ರದೇಶಗಳಿಗೆ ಅದು ಸಮರ್ಪಕವಾಗಿಲ್ಲವೆಂದು ನೀವು ಒಪ್ಪುವದಿಲ್ಲವೆ? ಅಂಥ ಪ್ರದೇಶಗಳಲ್ಲಿ ಬೇರಾವುದಾದರೊಂದು ಕೈಗಾರಿಕೆಯನ್ನು—ಉದಾಹರಣೆಗಾಗಿ ಒಕ್ಕಲತನವನ್ನು—ಬಳಸಿಕೊಳ್ಳಕೂಡದೇಕೆ?

ಉತ್ತರ—ಇದು ಬಹಳ ಹಳೆಯ ಪ್ರಶ್ನೆ. ಶಿಕ್ಷಣದ ಮಾಧ್ಯಮವಾಗಿ ಉಪಯೋಗಿಸಬಹುದಾದ ಯಾವುದೇ ಮೂಲ ಕೈಗಾರಿಕೆಯಲ್ಲಿ ಸರ್ವತ್ರ ವ್ಯಾಪ್ತಿಯ ಗುಣವಿರಬೇಕು. ೧೯೦೮ ರಷ್ಟು ಹಿಂದೆಯೆ ನಾನು, ಹಿಂದುಸ್ತಾನವನ್ನು ಸ್ವತಂತ್ರವಾಗಿಯೂ ತನ್ನ ಕಾಲಮೇಲೆಯೆ ತಾನು ನಿಲ್ಲುವಂತೆಯೂ ಮಾಡಬೇಕಾದರೆ ಪ್ರತಿಯೊಂದು ಮನೆಯಲ್ಲಿಯೂ ಚರಕಾವನ್ನು ಪ್ರತಿಷ್ಠಿಸಬೇಕೆಂಬ ನಿರ್ಧಾರಕ್ಕೆ ಬಂದೆನು. ಒಂದುಕಾಯಿ ಹತ್ತಿಯನ್ನು ಕೂಡ ಬೆಳೆಯದಿರುವ ಇಂಗ್ಲಂಡು ಹಿಂದುಸ್ತಾನಕ್ಕೂ ಇಡಿ ಜಗತ್ತಿಗೂ ಬಟ್ಟೆಯನ್ನು ನಿರ್ಯಾತ ಮಾಡಬಹುದಾದರೆ, ನೆರೆಹೊರೆಯ ಪ್ರಾಂತದಿಂದಲೋ ಜಿಲ್ಹೆಯಿಂದಲೋ ಹತ್ತಿಯನ್ನು ತರಿಸಬೇಕಾಗುವದೆಂಬ ಒಂದೇಕಾರಣದಿಂದ ನಾವೇಕೆ ನಮ್ಮ ಮನೆಗಳಲ್ಲಿ ಚರಕಾವನ್ನು ಪ್ರತಿಷ್ಠಿಸಬಾರದೋ ನನಗೆ ಅರ್ಥವಾಗುವದಿಲ್ಲ. ವಾಸ್ತವಿಕವಾಗಿ, ಒಂದಾನೊಂದು ಕಾಲದಲ್ಲಿ ಯಾವದೆ ಹತ್ತಿ ಬೆಳೆಯದೆ ಇದ್ದ ಯಾವ ಪ್ರದೇಶವೂ ಹಿಂದುಸ್ತಾನದಲ್ಲಿಲ್ಲ. "ಹತ್ತಿ ಪ್ರದೇಶ" ಗಳಿಗೆ ಮಾತ್ರ ಹತ್ತಿ ಬೆಳೆಯನ್ನು ಸೀಮಿತಗೊಳಿಸಿದ್ದು ಈಚೆಗಿನ ಸಂಗತಿ ಹಿಂದೀ ತೆನೆಗೆದಾರನಿಗೂ ನೂಲುವವನಿಗೂ ಹಾನಿಯನ್ನೊದಗಿಸಿದ ಈ ಅಸ್ವಾಭಾವಿಕ ವ್ಯವಸ್ಥೆಯನ್ನು ಹಿಂದುಸ್ತಾನದ ಮೇಲೆ ಜವಳಿ ಉತ್ಪಾದನೆಯಗಿಂತ ಸಂಬಂಧಗಳು ಬಲವಂತದಿಂದ ಹೊರಸಿದವು. ಇಂದಿಗೂ ಕರಿ ಹತ್ತಿ ಹಿಂದುಸ್ತಾನದಲ್ಲಿ ಎಲ್ಲೆಲ್ಲಯೂ ಬೆಳೆಯುತ್ತದೆ. ನೀವು ಮುಂದೊಡ್ಡಿದ ಬಗೆಯ ವಾದಗಳು ನಮ್ಮ ಉಪಕ್ರಮಶಕ್ತಿ, ಪ್ರಸಂಗಾವಧಾನ, ಧೈರ್ಯಗಳ ವಿಷಯದಲ್ಲಿ ಅಶ್ರದ್ಧೆಯನ್ನು ವ್ಯಕ್ತಗೊಳಿಸುತ್ತವೆ. ಇನ್ನೊಂದು ಸ್ಥಳದಿಂದ ಕಚ್ಚಾಸಾಮಗ್ರಿಗಳನ್ನು ತರಿಸುವದು ದಾಟಲಾರದ ತೊಡಕೆಂದು ನಾವು ಭಾವಿಸಿಕೊಂಡರೆ ಎಲ್ಲ ಉತ್ಪಾದನೆಯೂ ನಿರ್ನಾಮವಾಗಿ ಬಿಟ್ಟೀತು.

ಇದಲ್ಲದೆ, ಬತ್ತಲೆಯಾಗಿ ಒದ್ದಾಡುವದೊಂದೇ ಬದಲುಪಾಯವಾಗಿರುವ ಸಂದರ್ಭದಲ್ಲಿ ಸ್ವಂತ ಪ್ರಯತ್ನದಿಂದ ತನ್ನ ಅರಿವೆಗಳನ್ನು ತಯಾರಿಸಿಕೊಳ್ಳಲು ಯಾರಿಗಾದರೂ ಕಲಿಸಿದರೆ ಅದು ಒಂದು ಶಿಕ್ಷಣವೆ. ಹತ್ತಿ ನೇಯುವ ಕೈಗಾರಿಕೆಯ ವಿವಿಧ ಅವಸ್ಥೆಗಳ ಬುದ್ಧಿಪೂರ್ವಕ ಅರಿಮೆಯಲ್ಲಿ ಅತ್ಯುಚ್ಚ ಶೈಕ್ಷಣಿಕ ಗುಣವುಂಟು. ನಿಜವಾಗಿ ಮನುಷ್ಯನ ಸಮಸ್ತ ಶಿಕ್ಷಣಾವಸ್ಥೆಗಳು ಇದರಲ್ಲಿ ಅಡಕವಾಗಿರುವಷ್ಟು ಸಮೀಚೀನವಾಗಿ ಪ್ರಾಯಶಃ ಬೇರಾವೊಂದು ಕೈಗಾರಿಕೆಯಲ್ಲಿ ಇರಲಾರದು. ಮುಸಲ್ಮಾನರನ್ನು ಆವರಿಸಿರುವ ಸಂದೇಹಗಳನ್ನು ನಿವಾರಿಸಲು ಸದ್ಯಕ್ಕೆ ನಾವು ಸಮರ್ಥರಾಗಲಾರೆವು. ಏಕೆಂದರೆ ಅವುಗಳಬೇಕು ಭ್ರಾಮಕ ಕಲ್ಪನೆಯಲ್ಲಿದೆ, ಮತ್ತು ಆ ಭ್ರಮೆಗಳು, ಅವುಗಳಿಗೆ ಗುರಿಯಾದ ಪ್ರಾಣಿಯ ಪಾಲಿಗೆ, ಅವುಗಳು ಅವನ್ನು ಆವರಿಸಿರುವಷ್ಟು ಕಾಲ, ಸತ್ಯವೇ ಆಗಿರುತ್ತವೆ. ಆದರೆ ನಮ್ಮ ವಿಶ್ವಾಸ ಸ್ಪಷ್ಟವೂ ದೃಢವೂ ಆಗಿದ್ದರೆ, ನಮ್ಮ ಪದ್ಧತಿಯ ಸಾಫಲ್ಯವನ್ನು ನಾವು ಪ್ರದರ್ಶಿಸಬಲ್ಲೆವಾದರೆ, ಆಗ ಮುಸಲ್ಮಾನರು ತಾವಾಗಿ ನಮ್ಮ ಬಳಿಗೆ ಬಂದು ನಮ್ಮ ಮನಸ್ಸಿನ ಗುಟ್ಟನ್ನು ಕಲಿತುಕೊಳ್ಳಲು ಅಪೇಕ್ಷಿಸುವರು. ದರಿದರಿಗೆ ಮುಸ್ಲಿಂ ಜನತೆಗೆ ಮುಸ್ಲಿಂ ಲೀಗ್ ಅಥವಾ ಬೇರಾವ ಮುಸ್ಲಿಂ ಸಂಸ್ಥೆ ಮಾಡಿದ್ದಕ್ಕಿಂತ ಹೆಚ್ಚು ಉಪಕಾರವನ್ನು ಚರಕವೇ ಮಾಡಿದೆಯೆಂಬುದನ್ನು ಅವರಿನ್ನೂ ಮನಗಂಡಂತಿಲ್ಲ. ಬಂಗಾಲದಲ್ಲಿರುವ ನೇಕಾರರಲ್ಲಿ ಹೆಚ್ಚಿನವರು ಮುಸ್ಲಿಮರು "ಶಬನಮ್" ಬಟ್ಟೆ (ನಯವಾದ ಬಟ್ಟೆ) ಗಾಗಿ ಜಗತ್ಪ್ರಸಿದ್ಧವಾದ ಢಾಕಾನಗರದ ಕೀರ್ತಿಗೆ ಅಲ್ಲಿಯ ಮುಸ್ಲಿಮ ಹೆಣ್ಣುಮಕ್ಕಳ ನೂಲುವ ಕೌಶಲವೂ ಮುಸ್ಲಿಂ ನೇಕಾರರ ಕೈಚಳಕವೂ ಕಾರಣವಾಗಿತ್ತೆಂಬುದನ್ನೂ ನಾವು ಮರೆಯಕೂಡದು.

ಮಾತು ಮಹಾರಾಷ್ಟ್ರಕ್ಕೂ ಅನ್ವಯಿಸುತ್ತದೆ. ಈ ಭ್ರಮೆಗೆ ಅತ್ಯುತ್ತಮ ಚಿಕಿತ್ಸೆಯೆಂದರೆ, ನಮ್ಮ ಕರ್ತವ್ಯದ ಪಾಲನೆಯಲ್ಲಿ ನಾವು ಪೂರ್ಣಮಗ್ನರಾಗುವದು. ಸತ್ಯವೊಂದೇ ಬಾಳುವದು ಉಳಿದುದು ಕಾಲಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವದು. ಆದುದರಿಂದ ಎಲ್ಲರೂ ನನ್ನ ಕೈಬಿಟ್ಟು ಹೋದರೂ ನಾನು ಸತ್ಯಸಂಧನಾಗಿ ಉಳಿಯಬೇಕಾಗಿದೆ. ಇಂದು ನನ್ನ ದನಿ ಅರಣ್ಯರೋದನವಾಗಿರಬಹುದು; ಆದರೆ ನನ್ನದು ಸತ್ಯದನಿಯಾಗಿದ್ದರೆ ಅದು ಬೇರೆಲ್ಲ ದನಿಗಳು ಲೀನವಾದಾಗ ತಾನೊಂದೇ ರಣರಣಿಸುವದು.

## ಚಕ್ರವ್ಯೂಹ

ಪ್ರಶ್ನೆ:—"ನಯೀ ತಾಲೀಮ" (ಮೂಲ ಶಿಕ್ಷಣ) ಕ್ಕೆ ಸಮರ್ಥ ಶಿಕ್ಷಕರನ್ನು ಸಿದ್ಧಗೊಳಿಸಲು ಸಮಯಬೇಕು. ಈ ನಡುವೆ ಶಾಲೆಗಳಲ್ಲಿಯ ಶಿಕ್ಷಣವನ್ನು ಸುಧಾರಿಸಲು ಏನು ಮಾಡಬೇಕು? ಎಂದು ಅವಿನಾಶಲಿಂಗಂ ಚೆಟ್ಟಿಯಾರರು ಇಂಗ್ಲೀಷಿನಲ್ಲಿ ಕೇಳಿದರು. ಅದಕ್ಕಾಗಿ ಅವರನ್ನು ನಗೆಗೀಡುಮಾಡುತ್ತ ಗಾಂಧೀಜಿಯವರು ನಿಮಗೆ ಹಿಂದುಸ್ತಾನಿ ಮಾತಾಡಲು ಬಾರದಿದ್ದರೆ ಹೇಳಬೇಕೆನಿಸಿದುದನ್ನು ನೆರೆಯವರ ಕಿವಿಯಲ್ಲಿ ಗೊಣಗಿದರೆ ಅವನು ಅದನ್ನು ಹಿಂದುಸ್ತಾನಿಯಲ್ಲಿ ಅನುವಾದಿಸಿ ಹೇಳುವರೆಂದು ನುಡಿದುದರಿಂದ ದೊಡ್ಡ ಅಟ್ಟಹಾಸವೆದ್ದಿತು.

—೯ ನೇ ಪುಟ ನೋಡಿರಿ



# ಡಾಕ್ಟರರ ಮೇಲೆ ಟೀಕೆ

"(೧) ಡಾಕ್ಟರರು ಮಾಡುವ ರೋಗನಿದಾನ ಬಹಳ ಅನಿಶ್ಚಿತ ಸ್ವರೂಪದ್ದೆಂದೂ ಒಬ್ಬನೇ ರೋಗಿಯ ವಿಷಯದಲ್ಲಿ ಕಾಲಕಾಲಕ್ಕೆ, ಡಾಕ್ಟರ ಡಾಕ್ಟರರ ನಡುವೆ ಭಿನ್ನಭಿನ್ನವಾದ ನಿದಾನಗಳು ಹೊರಡುತ್ತವೆಯೆಂದೂ ಅನೇಕ ರೋಗಿಗಳ ರೋಗಗಳು ಅವರು ಸಾಯುವ ಅಥವಾ ಗುಣಹೊಂದುವ ವರೆಗೂ ನಿದಾನ ಹೊಂದದೆ ಉಳಿಯುವವೆಂದೂ ಸಾಮಾನ್ಯ ಅನುಭವವಲ್ಲವೆ?

"(೨) ನಿದಾನ ಸರಿಯಾಗಿಯೆ ಆಯಿತೆಂದಿಟ್ಟುಕೊಳ್ಳೋಣ, ಕಡಿಮೆಯೆಂದರೆ ಕಾಗದದಲ್ಲಿಯಾದರೂ ರೋಗವನ್ನು ವಾಸಿಮಾಡಬಲ್ಲ ಪರಿಹಾರೋಪಾಯಗಳನ್ನು ಕೈಕೊಳ್ಳುವದಕ್ಕೆ ಸಾಧ್ಯವಿಲ್ಲದಿದ್ದ ಮೇಲೆ ನಿದಾನದಿಂದೇನು ಫಲ? ವೈದ್ಯಶಾಸ್ತ್ರದ ಪುಸ್ತಕಗಳು ಈ ವಿಷಯದಲ್ಲಿ ಧೈರ್ಯದ ದನಿಯಿಂದ ಮಾತಾಡುವದಿಲ್ಲ. ನಿಸರ್ಗ ಚಿಕಿತ್ಸೆಯನ್ನೆ ಅನುಸರಿಸಬೇಕೆಂದರೆ, ನಿದಾನವಾದರೂ ಏತಕ್ಕೆ ಬೇಕು? ಏಕೆಂದರೆ, ಡಾಕ್ಟರ ಜನರಂತೆ ನೂರಾರು ರೋಗಗಳನ್ನು ನಂಬದೆ ನಿಸರ್ಗ ಚಿಕಿತ್ಸೆ ರೋಗದ ಏಕತ್ವವನ್ನು ನಂಬುವದಿಲ್ಲವೆ?

"(೩) ಡಾಕ್ಟರರು ಶಸ್ತ್ರ ಚಿಕಿತ್ಸೆಯಿಂದ ಭಿನ್ನವಾದ ಔಷಧ ಚಿಕಿತ್ಸೆಯನ್ನು ನಿರ್ದೇಶಿಸುವಾಗ ತಮ್ಮ ಶರೀರಜ್ಞಾನವನ್ನು ಎಷ್ಟಾದರೂ ಉಪಯೋಗಿಸುವರೆ? ಇಲ್ಲದಿದ್ದರೆ, ಒಂದಾನೊಂದು ಕಾಲದಲ್ಲಿ ಶರೀರವಿಜ್ಞಾನವನ್ನು ಅಭ್ಯಸಿಸಿ ಮುಂದೆ ನಿತ್ಯೋಪಯೋಗಕ್ಕೆ ಬಾರದಿದ್ದುದರಿಂದ ಅದನ್ನು ಮರೆತು ಬಿಟ್ಟ ಡಾಕ್ಟರರಿಗೆ ಇದಕ್ಕಾಗಿ ಏಕೆ ಗೌರವ ಸಿಗಬೇಕು? ಶರೀರ ವಿಜ್ಞಾನವನ್ನೂ ತ್ರಿದೋಷದ ರೋಗಜ್ಞಾನವನ್ನೂ ಅಭ್ಯಸಿಸಿ ನಿತ್ಯವ್ಯವಹಾರದಲ್ಲಿ ಅದನ್ನು ಹೆಸರಿಗೆ ಕೂಡ ಉಪಯೋಗಿಸದಿರುವದಕ್ಕೋಸ್ಕರ ವೈದ್ಯರಿಗೂ ಡಾಕ್ಟರರ ಗೌರವ ಅಥವಾ ಅಗೌರವ ಸಿಗಬೇಡವೆ?

"(೪) ವೈದ್ಯರಲ್ಲಿ ಆರೋಪಿಸಲ್ಪಟ್ಟ ದೋಷಗಳಿಗೆ, ಸಂಶೋಧನ ಮೊದಲಾದ ಕೆಲಸಗಳಿಗಾಗಿ ಸಂಸ್ಥೆಗಳನ್ನು ನಿರ್ಮಿಸುವ ತನ್ನ ಕರ್ತವ್ಯವನ್ನು ಸರಕಾರ ಮಾಡದಿರುವದೇ ನಿಜವಾದ ಕಾರಣವಲ್ಲವೆ? ವ್ಯಕ್ತಿಯ ಅಥವಾ ಸರಕಾರದ ತಪ್ಪಿಗೆ ಪದ್ಧತಿಯನ್ನೇ ದೂರುವದು. ನ್ಯಾಯ್ಯವೆ? ಖಾಸಗಿ ವೃತ್ತಿಯಲ್ಲಿರುವ ಡಾಕ್ಟರರು ಕೂಡ ಯಾವದೇ ಸಂಶೋಧನಗಳನ್ನು ಮಾಡುವದಿಲ್ಲ, ಇಷ್ಟೇ ಅಲ್ಲ, ಅವರಲ್ಲಿ ವಿದೇಶಗಳಲ್ಲಿ ನಡೆದಿರುವ ಸಂಶೋಧನಗಳನ್ನು ಕುರಿತು ಓದುವವರು ಕೂಡ ವಿರಳ.

"(೫) ಡಾಕ್ಟರರು ಮಹಾತ್ಮಾಜಿಯವರ ದೇಹವನ್ನು ಪದೇಪದೇ ಪರೀಕ್ಷಿಸುವದರಿಂದ ಅವರಿಗೆ ಸಾರ್ವಜನಿಕ ದೃಷ್ಟಿಯಲ್ಲಿ ಅನುಚಿತವೂ ಅನರ್ಹವೂ ಆದ ಪ್ರಸಿದ್ಧಿಯನ್ನು ಕೊಟ್ಟು ಮಹಾತ್ಮಾಜಿಯವರ ಗಮನಕ್ಕೆ ಅಥವಾ ಅದಕ್ಕಿಂತ ಹೆಚ್ಚು ಯೋಗ್ಯತೆಯುಳ್ಳ ಇತರ ಚಿಕಿತ್ಸಾ ಪದ್ಧತಿಗಳನ್ನು ಮೂಲೆಗುಂಪು ಮಾಡುವದಿಲ್ಲವೆ?"

ಶ್ರೀ ವ್ರಜಲಾಲ ನೆಹರೂ ಅವರ ಪ್ರಶ್ನೆಗಳಿವು. ಅವುಗಳಿಗೆ ನನ್ನ ಉತ್ತರ ಹೀಗಿದೆ.

(೧) ಈ ಪ್ರಶ್ನೆಯ ಸೂಚ್ಯಾರ್ಥ ಬಹಳ ಸತ್ಯವಾಗಿದೆ. ಆದರೂ ಡಾಕ್ಟರರ ಪ್ರಶ್ನೆ ಬೆಳೆದೇ ಇದೆ. ಈ ಶಕುನ ನಮ್ಮೆಲ್ಲರನ್ನೂ ಚಿಂತಿಸಹಚ್ಚಬೇಕು.

(೨) ಸರಿಯಾದ ನಿದಾನವಾದರೆ ಆ ನಿದಾನಕ್ಕೆ ಸರಿಯಾದ ಪರಿಹಾರೋಪಾಯಗಳು ಬರುತ್ತವೆಂದು ನನ್ನ ಅನುಭವ. ಅನೇಕ ಉಪಾಯಾಂತರಗಳನ್ನು ಸೂಚಿಸುತ್ತವೆಯೆಂದು ವೈದ್ಯಶಾಸ್ತ್ರದ ಪುಸ್ತಕಗಳನ್ನು ದೂರುವದು ಸರಿಯಲ್ಲ. ಸಂಕೀರ್ಣವಾದ ಮಾನವಪ್ರಕೃತಿ ಒಂದೇ ನಿರ್ದಿಷ್ಟ ಚಿಕಿತ್ಸೆಗೆ ನಿದಾನವೇ ಅವಶ್ಯವಿಲ್ಲೆಂದು ಹೇಳುವದು ಸತ್ಯವಲ್ಲ. ರೋಗದ ಏಕತೆ ಮತ್ತು ಚಿಕಿತ್ಸೆಯಲ್ಲಿ ನಿದಾನ ಬಹಳ ಸರಳವಾಗಿದೆ. ರೋಗದ ಏಕತೆ ಮತ್ತು ಚಿಕಿತ್ಸೆಯ ಏಕತೆಯೆಂಬುದು ದೊಡ್ಡ ವರ್ಗೀಕರಣ. ಯಾವನಿಸರ್ಗ ಚಿಕಿತ್ಸಕನೂ ಎಲ್ಲ ರೋಗಿಗಳಿಗೂ ಕಣ್ಮುಚ್ಚಿ ಮಣ್ಣಿನ ಪೋಲ್ಟೀಸು ಹಚ್ಚಲಾರ.

(೩) ಡಾಕ್ಟರರು ತಮ್ಮ ಶರೀರವಿಜ್ಞಾನದ ಉಪಯೋಗವನ್ನು ವ್ಯವಹಾರದಲ್ಲಿ ಮಾಡಿಕೊಳ್ಳುವದಿಲ್ಲವೆಂಬುದು ಅನ್ಯಾಯವಾದ ಆರೋಪ. ಡಾಕ್ಟರರಿಗೂ ವೈದ್ಯರಿಗೂ ಹೋಲಿಸುವದು ಸರಿಯಲ್ಲ. ಅವರಿಬ್ಬರು ಉಪಯೋಗಿಸುವ ನಿದಾನ ಪದ್ಧತಿ ತೀರ ಭಿನ್ನವಾಗಿದೆ. ತ್ರಿದೋಷ ಸಿದ್ಧಾಂತದ ಯೋಗ್ಯತೆಯ ವಿಷಯ ನನಗೆ ರವಷ್ಟು ಜ್ಞಾನವಿಲ್ಲ.

(೪) ಸಂಶೋಧನೆಗಾಗಿ ಸಂಸ್ಥೆಗಳನ್ನು ನಿರ್ಮಿಸದಿರುವದಕ್ಕಾಗಿ ಸರಕಾರವನ್ನು ಖಂಡಿಸುವಲ್ಲಿ ದನಿಗೂಡಿಸಲು ನಾನು ಸಿದ್ಧನಾಗಿಲ್ಲ. ನಿಜವಾದ ಸಂಶೋಧನೆಯ ವಿಷಯದಲ್ಲಿ ವೈದ್ಯರಿಗಿರುವ ಅನಾಸ್ಥೆಯನ್ನು ನಾನು ಎಂದಿನಿಂದಲೂ ದೂರುತ್ತ ಬಂದಿದ್ದೇನೆ. ಅವರಲ್ಲಿ ಮೇಲ್ಮಟ್ಟದವರು ಹಣ ಗಳಿಸುವದರಲ್ಲಿಯೇ ನಿರತರು. ಉಳಿದವರು ತೀರ ಅಜ್ಞಾನಿಗಳು, ಇಲ್ಲದಿದ್ದರೆ ಸಾಂಪ್ರದಾಯಿಕ ಆಯುರ್ವೇದ ಗ್ರಂಥಗಳಲ್ಲಿ ಸಿಕ್ಕಿದಷ್ಟರಿಂದಲೇ ಸುಲಭ ಸಂತುಷ್ಟರು. ಹೀಗೆ ಅಭಿಪ್ರಾಯಪಡಲು ನನಗೆ ದುಃಖವಾಗುತ್ತದೆ. ನಮ್ಮ ದೇಶ ಪರಿಸ್ಥಿತಿಗೆ ಯೋಗ್ಯವಾಗಿರುವ ಆಯುರ್ವೇದ ಮತ್ತು ಯುನಾನಿ ಪದ್ಧತಿಗಳಲ್ಲಿ ನನಗೆ ವಿಶೇಷ ಗೌರವವಿದ್ದರೂ ನಾನು ಈ ನಿರ್ಣಯಕ್ಕೆ ಬಂದಿದ್ದೇನೆ.

(೫) ನನ್ನ ಡಾಕ್ಟರ ಗೆಳೆಯರು ನನ್ನ ದೇಹವನ್ನು ಮೇಲಿಂದ ಮೇಲೆ ಪರೀಕ್ಷಿಸುವದರಿಂದ ಅವರಿಗೆ ಅನುಚಿತವಾದ ಅಥವಾ ಎಷ್ಟಾದರೂ ಪ್ರಸಿದ್ಧಿ ದೊರೆಯುತ್ತದೆಂದು ನನಗೆ ತೋರುವದಿಲ್ಲ. ಅವರಿಗೆ ಅದರ ಅವಶ್ಯಕತೆಯೂ ಇಲ್ಲ. ನಾನು ರಂಗದಲ್ಲಿಕಾಲಿಡುವ ಮೊದಲೇ ಅವರು ಪ್ರತಿಷ್ಠಿತರಾಗಿದ್ದರು. ಇತರ ಔಷಧ ಪದ್ಧತಿಗಳನ್ನು ಮೂಲೆಗುಂಪು ಮಾಡುವದಕ್ಕೂ ಅದು ಕಾರಣವಾಗಲಾರದು. ನನಗೆ ವೈದ್ಯ, ಹಕೀಮರಲ್ಲಿಯೂ ಗೆಳೆಯರೆಷ್ಟೊ ಇದ್ದಾರೆ. ಆದರೆ ಅವರಿಗೆ ಆಗಿಗಡಿಗೆ ವಿಸ್ತೃತವಾದ ನಿದಾನ ಅವಶ್ಯವೆನಿಸುವದಿಲ್ಲ. ನನ್ನ ದೇಹವನ್ನು ನಾನು ನಿದಾನಕ್ಕೆ ಒಪ್ಪಿಸುವದು ನಿಜ. ದುರ್ದೈವದಿಂದ ಅದನ್ನು ಪ್ರಸಿದ್ಧಗೊಳಿಸಲಾಗುತಿದೆ. ಆದರೆ ನಾನು ಔಷಧಗಳಿಂದ ಚಿಕಿತ್ಸೆ ಮಾಡಲು ನನ್ನ ದೇಹವನ್ನು ಒಪ್ಪಿಸುವದಿಲ್ಲ ನನ್ನ ಚಿಕಿತ್ಸೆಗೆ ಮುಖ್ಯವಾಗಿ ಪಂಚಭೂತಗಳೂ ಆಹಾರ ಪರಿವರ್ತನೆಯೂ ಮಾಲೀಸೂ ಉಪಯೋಗಿಸಲ್ಪಡುತ್ತವೆ.

ನಿಸರ್ಗಚಿಕಿತ್ಸೆಯಲ್ಲಿಯೂ ಸ್ಥಳೀಯ ಪದ್ಧತಿಗಳಲ್ಲಿಯೂ ನನಗಿರುವ ಅಭಿಮಾನದಿಂದ, ಪಾಶ್ಚಿಮಾತ್ಯ ಔಷಧಪದ್ಧತಿ ಸಂಪಾದಿಸಿದ ಪ್ರಗತಿಯ ಕಡೆಗೆ ನಾನು ಕುರುಡನಾಗಿಲ್ಲ. ಆ ಪದ್ಧತಿಯನ್ನು ಮಾಟಗಾರಿಕೆಯೆಂದು ನಾನು ಥೀಗರೆದಿದ್ದರೂ ಇದನ್ನು ಒಪ್ಪಿಕೊಳ್ಳುತ್ತೇನೆ. ನಾನು ಕಠೋರ ವಚನವನ್ನು ಹಿಂತಗೆದುಕೊಳ್ಳುವದಿಲ್ಲ. ಏಕೆಂದರೆ ಅದು ದೇಹವಿಚ್ಛೇದವನ್ನೂ ಅದರ ಪರಿಣಾಮವಾಗಿ ಬರುವ ಬೀಭತ್ಸತೆಯನ್ನು ಲೆಕ್ಕಿಸುವದಿಲ್ಲ; ಒಂದು ದೇಹದ ಜೀವಾವಧಿಯನ್ನು ಬೆಳೆಸುವ ಸಲುವಾಗಿ ಎಷ್ಟು ಕೆಟ್ಟ ಪ್ರಯೋಗವನ್ನು ಕೂಡ ಮಾಡಲು ಹಿಂಜರಿಯುವದಿಲ್ಲ; ಮತ್ತು ದೇಹದಲ್ಲಿರುವ ಅಮರ ಆತ್ಮವನ್ನು ಕಡೆಗಣಿಸುತ್ತದೆ. ನಿಸರ್ಗ ಚಿಕಿತ್ಸೆಗೆ ಮಹತ್ತರವಾದ ಇತಿಮಿತಿಗಳನ್ನಂತೂ ನಿಸರ್ಗ ಚಿಕಿತ್ಸಾವಾದಿಗಳ ವ್ಯೆಗಳ್ಳತನ ಗೊತ್ತಿದ್ದೂ ನಾನು ಅದಕ್ಕೇ ಅಂಟಿಕೊಂಡಿದ್ದೇನೆ. ಎಲ್ಲಕ್ಕಿಂತ ಹೆಚ್ಚಾಗಿ ನಿಸರ್ಗ ಚಿಕಿತ್ಸೆಯಲ್ಲಿ ಪ್ರತಿಯೊಬ್ಬನೂ ತನಗೆ ತಾನೇ ಡಾಕ್ಟರನಾಗಬಲ್ಲ; ಇತರ ವೈದ್ಯಕಗಳಲ್ಲಿ ಹಾಗಲ್ಲ.

ಉರುಳಿ ಕಂಚನ —ಮೋ. ಕ. ಗಾಂಧಿ

೪—೮—೧೯೪೬

# ದಕ್ಷಿಣ ಆಫ್ರಿಕೆ

[ ೧ನೇ ಪುಟದಿಂದ ]

"ಮಣೀಲಾಲರು ಮರಳಿ ಬರುವರೆಂದು ತಿಳಿದು ನನಗೆ ಸಂತೋಷ. ಇಲ್ಲಿನ ಹಿಂದೀಯ ಹೋರಾಟ ಉಚ್ಚ ಪಥದಲ್ಲಿದ್ದರೂ ಇಲ್ಲಿನ ಧುರೀಣರಿಗೆ ಅವರ ಸಹಾಯ ಸಿಕ್ಕುವದು. ಅಂತೆಯೆ ಹಲವು ಯುರೋಪಿಯನ್‌ರ ಬೆಂಬಲವೂ ಇದಕ್ಕೆ ಸಿಕ್ಕಿದೆ. ಆ ಸಂಖ್ಯೆ ಕಡಮೆ ಇರಬಹುದು."

ನಮ್ಮ ಜನರು ನಿಜವಾಗಿ ಅಹಿಂಸೆಯಿಂದ ಹೋರಾಟ ಸಾಗಿಸಿದರೆ ನಾನು ಈ ಮೊದಲು ಹೇಳಿದಂತೆ ನಮ್ಮವರಿಗೆ ಯಶಸ್ಸು ಸಿಕ್ಕುವದು. ಅಹಿಂಸೆಗೆ ಪರಾಜಯವೆಂಬುದೇ ಗೊತ್ತಿಲ್ಲ.

ಮತ್ತೊಬ್ಬ ಗೆಳೆಯ ಬರೆಯುತ್ತಾನೆ. —

"ಶ್ರೀಮತಿ ನಾಯಡೂರವರು ಕಣ್ಮರೆಯಾದುದನ್ನು ನೀವು ಕೇಳಿರುವಿರಿ. ಮರಣಪೂರ್ವ ಮೂರು ತಿಂಗಳ ಅವರಿಗೆ ಅಪಘಾತವೊಂದು ಸಂಭವಿಸಿತು. ಫೋನ ಅಧಿಕಾರಿಗಳ ತಪ್ಪಿನಿಂದ ಆ ಅವಧಿಯಲ್ಲೆಲ್ಲ ನನ್ನ ಫೋನ ನಂಬರು ಅವರಿಗೆ ದೊರೆಯಲಿಲ್ಲ. ನಾಯಡು ನನ್ನನ್ನು ಕಾಣಬಯಸಿದರು. ಆದರೆ ಅವರ ಮರಣಾನಂತರದ ದಿನದ ವರೆಗೆ ನನ್ನಗೂಡ ಅವರ ಸಂಬಂಧ ಮಾಡಗೊಡಲಿಲ್ಲ. ಅವಳಲ್ಲಿ ನನ್ನ ಪ್ರೇಮ. ಅವಳ ಸ್ವಭಾವ ಒಳ್ಳೆ ಪ್ರೇಮಳ, ನಿಜ ಮಿತ್ರ. ಮನೆತನ ನಡೆಸುವಲ್ಲಿ ಒಳ್ಳೆ ಜಾಣಳವಳು. ನಾಯಡೂರ ಮನೆಯಲ್ಲಿ ಯಾವಾಗಲೂ ಸುಂದರ ವಾತಾವರಣವಿರುತಿದ್ದಿತು. ಅತಿಥಿಗಳಿಗೆ ಯಾವಾಗಲೂ ಸುಸ್ವಾಗತ. ಅವಳೆಂಥ ಶೂರಳು? ಹಿಂದುಸ್ತಾನದಲ್ಲಿ ಮಕ್ಕಳಿರುವವಧಿಯಲ್ಲೆಲ್ಲ ಅವಳೆಷ್ಟೊಂದು ವಿವಂಚನೆಗೊಳಗಾಗಿರಬಹುದು. ಅವಳ ಮತ್ತು ಥೊಂಬಿಯವರ ಸಂಯುಕ್ತ ಸ್ಮಾರಕವಾಗಬೇಕೆಂದು ನನ್ನ ಆಶೆ!!

ನಾನು ಅಲ್ಲಿ ಸತ್ಯಾಗ್ರಹ ಹೂಡಿದಾಗ ನಾಯಡೂ ಅವರ ಪತಿರಾಜ ಮೊದಲನೆ ಸತ್ಯಾಗ್ರಹಿಗಳಲ್ಲಿ ಒಬ್ಬರಾಗಿದ್ದರೆಂದು ನಾನು ಇಲ್ಲಿ ಹೇಳಬಯಸುತ್ತೇನೆ.

ಪುಣೆ ಮೋ. ಕ. ಗಾಂಧಿ

೧೧—೭—೪೬

# ಕಾಂ. ಮಂತ್ರಿಮಂಡಲಗಳೂ ಮೂಲ ಶಿಕ್ಷಣವೂ

[ ೮ನೇ ಪುಟದಿಂದ ]

ಮುಂದುವರಿಯುತ್ತ ಅವರು ಹೇಳಿದರು:— "ಈಗಿನ ಶಿಕ್ಷಣ ಪದ್ಧತಿ ಹಿಂದುಸ್ತಾನಕ್ಕೆ ಸ್ವಾತಂತ್ರ್ಯವನ್ನು ತರುವ ಬದಲು ಅದರ ಪರಾಧೀನತೆಯನ್ನು ಇನ್ನಷ್ಟು ಬಿಗಿಗೊಳಿಸುವದೆಂದು ನಿಮಗೆ ಮನವರಿಕೆಯಾಗಿದ್ದರೆ, ಬೇರೊಂದು ಪದ್ಧತಿ ಅದರ ಸ್ಥಾನಕ್ಕೆ ಬರಲು ಸಿದ್ಧವಾಗಿರಲಿ ಇಲ್ಲದಿರಲಿ ಅಮುಷ್ಟ ಪದ್ಧತಿಗೆ ಉತ್ತೇಜನ ಕೊಡಲು ನೀವು ನಿರಾಕರಿಸಬೇಕು. ಮೂಲಶಿಕ್ಷಣದ ತತ್ವಗಳಿಗೆ ಅವರಣದೊಳಗೆ ಏನೇನನ್ನು ಮಾಡಲು ಸಾಧ್ಯವೋ ಅವನ್ನಷ್ಟು ಮಾಡಿ ನೀವು ಸಂತುಷ್ಟರಾಗಬೇಕು. ಈ ಕರಾರಿನಿಂದ ಮಂತ್ರಿಗಳು ಜನರಿಗೆ ಬೇಕಿಲ್ಲವಾದರೆ ಅವರು ರಾಜೀನಾಮೆ ಕೊಡುವದು ಪರಮಸುಖ. ಜೀವನದಾಯಿಯಾದ ಆಹಾರವನ್ನು ಒದಗಿಸಲು ಸಾಧ್ಯವಾಗದಿದ್ದರೆ ಅಥವಾ ಅದು ಜನರಿಗೆ ರುಚಿಸದೆಹೋದರೆ ಅದಕಾಗಿ ಅವರಿಗೆ ವಿಷವನ್ನು ಒದಗಿಸುವದರಲ್ಲಿ ಮಂತ್ರಿಗಳು ಪಾಲುಗಾರರಾಗಲಾರರು"

ಪ್ರಶ್ನೆ:— ನೀವನ್ನುತ್ತೀರಿ, ಮೂಲಶಿಕ್ಷಣಕ್ಕೆ ಹಣಬೇಕಿಲ್ಲ, ಜನಬೇಕು, ಎಂದು ಆದರೆ ಜನರನ್ನು ತರಬೇತಿಗೊಳಿಸಲು ಸಂಸ್ಥೆಗಳು ಅವಶ್ಯ, ಅವಕ್ಕೆ ಮತ್ತೆ ಹಣ ಅವಶ್ಯ. ಈ ಚಕ್ರವ್ಯೂಹದಿಂದ ಪಾರಾಗುವ ಬಗೆ ಹೇಗೆ?

ಉತ್ತರ— ಇದಕ್ಕೆ ಪರಿಹಾರ ನಿಮ್ಮ ಕೈಯಲ್ಲೆ ಇದೆ. ನಿಮ್ಮಿಂದಲೇ ಮೊದಲು ಮಾಡಿರಿ "ಔದಾರ್ಯ ಮನೆಯಲ್ಲಿಯೆ ಮೊದಲಾಗಬೇಕು" (Charity begins at home) ಎಂಬರ್ಥದ ಒಳ್ಳೆಯ ಇಂಗ್ಲಿಷ ಗಾದೆಯೊಂದಿದೆ. ಆದರೆ ನೀವು ಸ್ವತಃ ಆರಾಮ ಖುರ್ಚಿಯಲ್ಲಿ ಸಾಹೇಬರಂತೆ ಬಿರಗಿ, ನಮಗಿಂತ "ಕೆಳಗಿನವರು" ಕೆಲಸ ಮಾಡಿಕೊಡಬೇಕೆಂದು ಬಯಸಿದರೆ ಮಾತ್ರ ನೀವು ಎಲ್ಲಿಗೂ ತಲಪುವದು ಸಾಧ್ಯವಿಲ್ಲ. ಅದು ನನ್ನ ದಾರಿಯಲ್ಲ. ಎಷ್ಟೇ ಸಣ್ಣ ರೀತಿಯಿಂದಾದರೂ ನನ್ನಿಂದಲೇ ಮತ್ತು ನನ್ನ ನೆರೆಹೊರೆಯಿಂದಲೇ ಮೊದಲಿಸಿ ಕೆಲಸ ಮಾಡುವದು ಚಿಕ್ಕಂದಿನಿಂದಲೂ ನನ್ನ ಅಭ್ಯಾಸ. ಈ ವಿಷಯದಲ್ಲಿ ನಾವು ಬ್ರಿಟಿಶ ಜನರ ಇತಿಹಾಸದಿಂದೊಂದು ಹಾಳೆಯನ್ನು ಪರಿಶೀಲಿಸೋಣ. ಮೊಟ್ಟಮೊದಲು ಹಿಂದುಸ್ತಾನಕ್ಕೆ ಬರಿ ಕೈಬೆರಳಿನಲ್ಲೆಣಿಸುವಷ್ಟು ಇಂಗ್ಲೀಷರು ಬಂದು ನೆಲಸಿದರು. ಮುಂದೆ ಅವರು ತಮಗಾಗಿ ಇಲ್ಲಿ ಒಂದು ಸಾಮ್ರಾಜ್ಯವನ್ನೇ ಸಿದ್ಧಗೊಳಿಸಿಕೊಂಡರು. ಆ ಸಾಮ್ರಾಜ್ಯದಲ್ಲಿ ರಾಜಕೀಯ ಭಾವಕ್ಕಿಂತಲೂ ಸಾಂಸ್ಕೃತಿಕ ಭಾವ ಪ್ರಬಲವಾಗಿದೆ. ಎಲ್ಲಿಯ ವರೆಗೆ ಅಂದರೆ, ನಾವಿಂದು ಇಂಗ್ಲೀಷ ಭಾಷೆಗೆ ಮನಸ್ಸನ್ನು ಸೂರೆ ಕೊಟ್ಟುಬಿಟ್ಟಿದ್ದೇವೆ. ಅದರ ಸಂಕಲೆಗಳನ್ನು ಗುಲಾಮರಂತೆ ಅಪ್ಪಿಕೊಳ್ಳುತಿದ್ದೇವೆ. ನಮ್ಮ ಮಾತೃಭಾಷೆಯನ್ನು ಕೂಡ ಅದರ ಮುಂದೆ ಕುಬ್ಜೀಕರಿಸುತಿದ್ದೇವೆ. ಅವರು ಎಂಥ ವಿಶ್ವಾಸದಿಂದ ಒಮ್ಮನಸಿನ ಭಕ್ತಿಯಿಂದ, ತ್ಯಾಗ ಪ್ರಯತ್ನಶೀಲತೆಗಳಿಂದ ಕೆಲಸಮಾಡಿರಬೇಕೆಂದು ಊಹಿಸಿರಿ. ಮನಸಿದ್ದಲ್ಲಿ ಮಾರ್ಗವಿದೆಯೆಂದಿಷ್ಟೇ ಇದು ಸೂಚಿಸುತ್ತದೆ. ನಾವು ಹಟದಿಂದ ಬೇಕಾದ್ದು ಬಂದರೂ ಬಿಟ್ಟುಗೊಡದೆ ಗಟ್ಟಿ ಮನಸಿನಿಂದ ಕೆಲಸ ಮಾಡೋಣ. ಅಂದರೆ ಎಲ್ಲ ತೊಡಕುಗಳೂ ಮಂಜಿನಂತೆ ಕರಗಿ ಹೋಗುವವು.

## ಇಂಗ್ಲೀಷಿನ ಸ್ಥಾನ

ಪ್ರಶ್ನೆ:— ಈ ಯೋಜನೆಯಲ್ಲಿ ಇಂಗ್ಲೀಷಿನ ಸ್ಥಾನವೇನು? ಅದು ಒತ್ತಾಯದ ವಿಷಯವಾಗಿರಬೇಕೋ ಅಥವಾ ಐಚ್ಛಿಕ ಅಥವಾ ದ್ವಿತೀಯ ಭಾಷೆಯಾಗಿ ಕಲಿಸಬೇಕೊ?

ಉತ್ತರ:— ನಮ್ಮ ಮಾತೃಭೂಮಿಯಲ್ಲಿ ಕೊರತೆಗಳೆಷ್ಟೇ ಇದ್ದರೂ ನಾವು ತಾಯಿಯ ಪಕ್ಷಕ್ಕೆ ಅಂಟಿಕೊಂಡಂತೆ ಅದಕ್ಕೆ ಅಂಟಿಕೊಳ್ಳಬೇಕು—ಅದೊಂದೇ ನಮಗೆ ಜೀವನದಾಯಿಯಾದ ಹಾಲನ್ನು ಕೊಡಬಲ್ಲದು. ಇಂಗ್ಲೀಷು ತನ್ನ ಸ್ಥಾನದಲ್ಲಿದ್ದರೆ ನನಗೆ ಅದರ ಮೇಲೆ ಒಳ್ಳೆ ಪ್ರೀತಿ; ಆದರೆ ಅದು ತನಗೆ ಸಲ್ಲದ ಸ್ಥಾನವನ್ನು ಅತ್ರಮಿಸಿದರೆ ನಾನು ಅದರ ಕಡುವೈರಿ. ಇಂಗ್ಲೀಷು ಇಂದು ಜಾಗತಿಕ ಭಾಷೆಯಾಗಿದೆಯೆಂಬುದು ಸರ್ವಮಾನ್ಯ. ಆದುದರಿಂದ ಅದಕ್ಕೆ ದ್ವಿತೀಯ, ಐಚ್ಛಿಕ ಭಾಷೆಯ ಸ್ಥಾನವನ್ನು ಕೊಟ್ಟೇನು. ಆದರೆ ಅದು ಶಾಲಾವಸ್ಥೆಯಲ್ಲಲ್ಲ, ವಿಶ್ವವಿದ್ಯಾಲಯಾವಸ್ಥೆಯಲ್ಲಿ ಅದು ಆರಿಸಿದ ಕೆಲವರಿಗೆ ಹೊರತು ಕೋಟ್ಯಂತರ ಜನರಿಗೆ ನಿಲುಕದ ವಸ್ತು. ಇಂದು ನಮಗೆ ಧರ್ಮಾರ್ಥ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯವಾಗಿ ಒದಗಿಸುವ ಸಾಮರ್ಥ್ಯ ಕೂಡ ಇಲ್ಲದಿರುವಾಗ ಇಂಗ್ಲೀಷು ಕಲಿಸಲು ವ್ಯವಸ್ಥೆಯನ್ನು ಹೇಗೆ ಮಾಡೋಣ? ರಶಿಯಾ ತನ್ನ ಎಲ್ಲ ವೈಜ್ಞಾನಿಕ ಪ್ರಗತಿಯನ್ನು ಇಂಗ್ಲೀಷಿಲ್ಲದೆಯೆ ಸಾಧಿಸಿದೆ. ಇಂಗ್ಲೀಷಿಲ್ಲದೆ ನಮಗೆ ದಿನ ಹೋಗಲಾರದೆಂದು ಎನಿಸಲು ನಮ್ಮ ಮಾನಸಿಕ ದಾಸ್ಯವೇ ಕಾರಣ. ನಾನು ಎಂದೆಂದಿಗೂ ಆ ಪರಾಜಯವಾದಿ ಮತಕ್ಕೆ ಸೇರಲಾರೆ.

ಪುಣೆ —ಪ್ಯಾರೆಲಾಲ

೩—೮—೪೬

## ಗೊತ್ತುವಳಿ

ಶಿಕ್ಷಣ ಮಂತ್ರಿಗಳ ಪರಿಷತ್ತಿನಲ್ಲಿ ಈ ಕೆಳಗಿನ ಗೊತ್ತುವಳಿ ಸ್ವೀಕರಿಸಲ್ಪಟ್ಟಿತು.

"ಪುಣೆಯಲ್ಲಿ ಜುಲೈ ೨೯, ೩೦ ಕ್ಕೆ ಸೇರಿದ ಶಿಕ್ಷಣ ಮಂತ್ರಿಗಳ ಮತ್ತು ಕಾರ್ಯಕರ್ತರ ಪರಿಷತ್ತು ರಾಷ್ಟ್ರದ ಮುಂಬರುವ ಅತ್ಯಂತ ಅವಸರದ ಶೈಕ್ಷಣಿಕ ಸಮಸ್ಯೆಗಳಲ್ಲಿ ಕೆಲವನ್ನು ಚರ್ಚಿಸಿ ಕೆಲ ಗೊತ್ತುವಳಿಗಳನ್ನು ಕೈಕೊಂಡಿತು. ಅವುಗಳಲ್ಲಿ ಕೊನೆಯದು ಹೀಗಿದೆ;

"ಈ ಪರಿಷತ್ತಿನ ಅಭಿಪ್ರಾಯದಲ್ಲಿ ಮಕ್ಕಳ ದೈಹಿಕ ಆರೋಗ್ಯವೂ ಅವುಗಳಿಗೆ ಯೋಗ್ಯ ಆಹಾರ, ಚಿಕಿತ್ಸೆ ಮತ್ತು ನಿವಾರಕ ರೋಗ ಬರುವದಕ್ಕೇ ಮೊದಲೇ ತಡೆಯುವ ವೈದ್ಯಕೀಯ ಸಹಾಯ ಇವುಗಳನ್ನೊದಗಿಸುವದೂ ರಾಷ್ಟ್ರೀಯ ಶಿಕ್ಷಣದ ಅಂತರ್ಗತ ಅಂಗಗಳಾಗಿವೆ. ಮೂಲ ಮತ್ತು ಮೂಲೇತರ ಶಾಲೆಗಳೆರಡರಲ್ಲಿಯೂ ಈ ಶೈಕ್ಷಣಿಕ ಯೋಜನೆಯನ್ನು ಕಾರ್ಯಕ್ಕೆ ತರಲು ಅವಶ್ಯವಾದ ಕ್ರಮಗಳನ್ನು ಕೈಕೊಳ್ಳಬೇಕು."

ಇವುಗಳನ್ನು ಮಂಡಿಸಿದ ಆಶಾದೇವಿಯವರು, ಜನತೆಯ ಬೆಂಬಲವಿಲ್ಲದೆ ಇವುಗಳನ್ನು ಆಚರಣೆಗೆ ತರಲು ಸಾಧ್ಯವಾಗದೆಂದು ತಿಳಿಸುತ್ತಾರೆ. ಇದಕ್ಕೋಸ್ಕರ ಶಿಕ್ಷಣಜ್ಞರು, ವೈದ್ಯರು, ಆಹಾರಜ್ಞರು, ಸಮಾಜ ಸೇವಕರು, ಗ್ರಾಮಸೇವಕರು ಮೊದಲಾದ ವಿಶೇಷಜ್ಞರ ಚಿಕ್ಕ ಪರಿಷತ್ತೊಂದನ್ನು ಕೂಡಿಸಬೇಕೆಂದು ಸೂಚಿಸುತ್ತಾರೆ.

## ಮೊದಲು ಮಾಡಿ ತೋರಿಸಿರಿ

ಅಹಮ್ಮದಾಬಾದದಲ್ಲಿ ನಡೆದ ಕಟಕತನದ ಬಗ್ಗೆ ಪತ್ರ ಲೇಖಕನೊಬ್ಬನು " ಬರೆಯುತ್ತಾನೆ ಅವನ ಪತ್ರದಲ್ಲಿಯ ಯುಕ್ತ ಭಾಗವನ್ನು ಕೆಳಗೆ ಕೊಟ್ಟಿದ್ದೇನೆ

"ದೊಂಬಿಗಳನ್ನು ಹತ್ತಿಕ್ಕುವ ಉಪಾಯಗಳನ್ನು ಕುರಿತು ನೀವು ಬರೆಯಬೇಕೆಂದು ನಾನು ಬಯಸುತ್ತೇನೆ. ಎರಡು ತಿಂಗಳಗಳ ಹಿಂದೆ ನೀವು ಅಹಿಂಸಕ ಸೇವಾದಲ—ಅಹಿಂಸಾತ್ಮಕ ಸ್ವಯಂಸೇವಕ ದಳದ ಬಗ್ಗೆ ಬರೆದಿರಿ. ಆದರೆ ದೇಶದಲ್ಲಿಯ ಪರಿಸ್ಥಿತಿಯನ್ನು ನಿರೀಕ್ಷಿಸಿದರೆ ಅದು ಸಾಗಾಣದು. ಬ್ರಿಟಿಶ್ ಸರಕಾರದಗೂಡ ಅಹಿಂಸಾತ್ಮಕವಾಗಿ ಹೇಗೆ ಹೋರಾಡಬೇಕೆಂಬುದನ್ನು ನೀವು ಕಲಿಸಿದಂತೆ ದೊಂಬಿಯ ಪ್ರದೇಶಕ್ಕೆ ನೀವು ಹೋಗಿ ದೊಂಬಿಯನ್ನು ಹೇಗೆ ಶಾಂತಗೊಳಿಸಬೇಕೆಂಬುದನ್ನು ಸ್ವಂತದ ಅನುಭವದಿಂದ ಕಲಿಸಬೇಕು. ನೀವಿಂದು ಅಹಮದಾಬಾದದಲ್ಲಿರುವಿರೆಂದು ತಿಳಿಯಿರಿ. ನೀವು ದೊಂಬಿಯನ್ನು ಶಾಂತಗೊಳಿಸುವದಕ್ಕಾಗಿ ಹೊರಹೊರಟರೆ ಎಷ್ಟು ಜನ ಸ್ವಯಸೇವಕರು ನಿಮ್ಮನ್ನು ಕೂಡಿಕೊಳ್ಳುವರು? ನಮ್ಮ ಇಬ್ಬರು ಕಾಂಗ್ರೆಸ್ ಕಾರ್ಯಕರ್ತರು ಶ್ರೀ ವಸಂತರಾವ ಮತ್ತು ಶ್ರೀ ರಾಜಬಲಿಯವರು ಈ ಉದ್ದೇಶದಿಂದ ಹೊರಗೆ ಹೋದರು ಮತ್ತು ಗೂಂಡಾರಿಗೆ ಆಹುತಿಯಾದರು. ಧ್ಯೇಯಸಾಧನೆಯಲ್ಲಿ ಅವರು ತಮ್ಮ ಪ್ರಾಣಾರ್ಪಣೆಯನ್ನೇ ಮಾಡಿದರು. ಇದಕ್ಕಾಗಿ ಅವರು ಅಭಿನಂದನಾರ್ಹರು. ಆದರೆ ಅವರನ್ನನುಸರಿಸುವ ಧೈರ್ಯ ಇನ್ನಾರಿಗು ಬರಲೊಲ್ಲದು ಉಳಿದವರಲ್ಲಿ ಅದೇ ಬಗೆಯ ಆತ್ಮವಿಶ್ವಾಸವಿರುವದಿಲ್ಲ. ಎಲ್ಲರಲ್ಲಿ ಅಂಥ ವಿಶ್ವಾಸವಿದ್ದರೆ ದೊಂಬಿಗಳೇ ಏಳುತಿರಲಿಲ್ಲ. ಒಂದು ವೇಳೆ ಎದ್ದಿದ್ದರೆ ಇಂದು ದೊಂಬಿಗಳೇಳುವ ಮಟ್ಟದಲ್ಲಿ ಇಲ್ಲವೆ ಸ್ವರೂಪದಲ್ಲಿ ಅವು ಬಲಿಯುತಿರಲಿಲ್ಲ. ಆದರಿಂದು ಈ ಬಗೆಯ ಪರಿಸ್ಥಿತಿ ಕೇವಲ ಕನಸಿನಲ್ಲಿ ಮಾತ್ರವೆಂಬುದು ಸ್ಪಷ್ಟವಿದೆ. "ನಿಮ್ಮ ನೇತೃತ್ವ ಮತ್ತು ಉದಾಹರಣೆಯಿಂದ ನಮ್ಮಂಥವರಲ್ಲಿ ಧೈರ್ಯ ಮತ್ತು ಆತ್ಮವಿಶ್ವಾಸ ಹುಟ್ಟುವವು ಮತ್ತು ಪ್ರೋತ್ಸಾಹನೆಯೂ ಉಂಟಾಗುವದು. ಒಮ್ಮೆ ನೀವು ಮಾರ್ಗ ತೋರಿಸಿಬಿಟ್ಟರೆ ಸ್ಥಳಿಕ ಕಾರ್ಯಕರ್ತರು ಪ್ರಸಂಗ ಬಂದಾಗೆಲ್ಲ ಅದರಂತೆ ಕಾರ್ಯ ಮಾಡುವರು. ನೀವು ಪ್ರತ್ಯಕ್ಷ ಕಾರ್ಯ ಮಾಡಿ ಉದಾಹರಣೆ ಹಾಕಿಕೊಡದೆ ಬರಿ ಬರಹ ಇಲ್ಲವೆ ಭಾಷಣಗಳು ಸಾಮಾನ್ಯ ಜನರಿಗೆ ಪ್ರಯೋಜನಕಾರಿಯಾಗಲಾರವು. ಕಾಂಗ್ರೆಸ್ಸಿಗರು ಅಹಿಂಸಾತ್ಮಕ ಮಾರ್ಗವಾಗಿ ಸಮಾಜಬಾಂಧವರ ರಕ್ಷಣೆಯನ್ನು ಸಂಘಟಿಸಲಾರರು."

ಮೇಲೆ ಉಲ್ಲೇಖಿಸಿದ ಸೂಚನೆ ನನಗೆ ಸರಿದೋರುತ್ತದೆ. ಕೆಲ ಬಗೆಯ ಪ್ರತೀಕಾರವನ್ನು ಮಾಡುವದು ಜನತೆಗೆ ಬೇಕೆನಿಸಿದ್ದರಿಂದ ಜನರು ನನ್ನ ಸಲಹೆ ಸ್ವೀಕರಿಸಿ ಅಹಿಂಸಾತ್ಮಕ ಹೋರಾಟ ನಡೆಸಿದರು. ಆದರೆ ಅವರ ಅಹಿಂಸೆ ಅವರ ನಿಃಸಹಾಯತೆಯಿಂದ ಉದ್ಭವಿಸಿದ್ದಿತೆಂಬುದನ್ನು ನಾನು ಒಪ್ಪಲೆಬೇಕು. ಆದುದರಿಂದ ಅದು ಅಶಕ್ತರ ಶಸ್ತ್ರವಾಗಿತ್ತು. ಅಂತೆಯೆ ನಾವಿಂದು ನೇತಾಜಿ ಸುಭಾಸಚಂದ್ರ ಬೋಸ ಮತ್ತು ಅವರ ಆಜಾದ ಹಿಂದ ಸೇನೆಯನ್ನು ಪೂಜಿಸುತ್ತಿರುವೆವು. ಹಿಂದುಸ್ತಾನಕ್ಕೆ ಹೋದ ಕೂಡಲೆ ಅವರು ಅಹಿಂಸಾ ಮಾರ್ಗವನ್ನನುಸರಿಸಲಿಕ್ಕೆ ಬೇಕೆಂದು ನೇತಾಜಿಯವರೇ ತಮ್ಮ ಸೈನಿಕರಿಗೆ ಹೇಳಿದ್ದರೆಂಬುದನ್ನು ನಾವು ಮರೆಯುತ್ತೇವೆ. ಹಿಂದರಾಷ್ಟ್ರ ಸೇನೆಯ ಧುರೀಣರು ಇದನ್ನು ನನಗೆ ಹೇಳಿದ್ದಾರೆ. ಆದರೆ ನಾವು ಸಾರಾಸಾರ ವಿವೇಕಬುದ್ಧಿಯನ್ನ ಕಳೆದುಕೊಂಡು ಬಿಟ್ಟಿದ್ದೇವೆ. ಅದನ್ನು ಮತ್ತೆ ಗಳಿಸಬೇಕಾದರೆ ನೇತಾಜಿಯವರು ಅವರ ಮುಂದೆ ಇಟ್ಟ ಧ್ಯೇಯದಂತೆ ಹಿಂದರಾಷ್ಟ್ರ ಸೇನೆಯವರು ನಡೆಯಬೇಕಾಗುವದು. ಅಹಿಂಸೆಯಲ್ಲಿ ವಿಶ್ವಾಸವಿದ್ದವರು ಹಿಂಸಾಮಯ ವಾತಾವರಣದಲ್ಲಿ ಕಾರ್ಯ ಮಾಡುವದು ಬಹಳ ಕಠಿನ. ಆದರೆ ಅಹಿಂಸಾ ಮಾರ್ಗವನ್ನನುಸರಿಸುವದರಲ್ಲಿ ಹಿಂಸಾಮಾರ್ಗವನ್ನನುಸರಿಸುವವರಿಗಿಂತ ಹೆಚ್ಚು ಧೈರ್ಯ ಬೇಕಾಗುವುದು. ಇಂಥ ಅಹಿಂಸೆಯ ಪುರಾವೆ ಕೊಡಲು ನಾವು ಸಮರ್ಥರಾಗಿಲ್ಲ. ಶ್ರೀ ಗಣೇಶಶಂಕರ ವಿದ್ಯಾರ್ಥಿ, ಶ್ರೀ ವಸಂತರಾವ ಮತ್ತು ಶ್ರೀ ರಾಜಬಲಿಯಂಥವರ ಕೃತಿಗಳು ಶೂರರ ಅಹಿಂಸೆಯ ಉದಾಹರಣೆಯೆಂದು ನಾವು ತಿಳಿದುಕೊಳ್ಳತಕ್ಕದ್ದು. ಆದರೆ ಜಾತೀಯತೆಯ ವಿಷವು ವಿಪರೀತ ಹಬ್ಬಿದಾಗ ಮೇಲೆ ಉಲ್ಲೇಖಿಸಿದ ಸ್ವಾರ್ಥತ್ಯಾಗದ ಪರಿಣಾಮವನ್ನು ಪ್ರದರ್ಶಿಸಲು ನಾವು ಸಮರ್ಥರಾಗಲಾರೆವು. ಅದಕ್ಕಾಗಿ ಗಣೇಶ ಶಂಕರ ವಿದ್ಯಾರ್ಥಿಯಂಥ ಅನೇಕರು ತಮ್ಮ ಪ್ರಾಣವನ್ನು ಸಮರ್ಪಿಸಬೇಕಾಗುವುದು. ಶ್ರೀ ವಸಂತರಾವ ಮತ್ತು ಶ್ರೀ ರಾಜಬಲಿ ಇವರ ಉದಾಹರಣೆಯನ್ನು ಅಹಮದಾಬಾದಿನಲ್ಲಿ ಬೇರೆ ಯಾರೂ ಅನುಕರಿಸಲಿಲ್ಲೆಂಬುದನ್ನು ನೋಡಿದರೆ ಅಹಿಂಸಾತ್ಮಕ ಕೃತಿಗಳಲ್ಲಿ ನಮ್ಮ ಪ್ರಾಣಾರ್ಪಣೆ ಮಾಡುವ ಮಟ್ಟದ ಸ್ವಾರ್ಥತ್ಯಾಗಭಾವನೆ ನಮ್ಮಲ್ಲಿ ಇನ್ನೂ ಉಂಟಾಗಿಲ್ಲೆಂಬುದು ಸ್ಪಷ್ಟವಾಗುವುದು. ಈ ಪರಿಸ್ಥಿತಿಯಲ್ಲಿ ಎರಡನೆಯವರು ಬರಲಿ ಬಾರದಿರಲಿ ನನ್ನ ಪಕ್ಕೆ ನಾನು ಅದರಲ್ಲಿ ಧುಮುಕಬೇಕೆಂದು ಈ ಪತ್ರ ಲೇಖಕನು ನ್ಯಾಯ್ಯವಾಗಿ ಹೇಳಿದ್ದಾನೆ ನಾನು ಮನೆಯಲ್ಲಿ ಕುಳಿತು ಅಲ್ಲಿಗೆ ಹೋಗಿ ಪ್ರಾಣಾಹುತಿ ಮಾಡಿರೆಂದು ಎರಡನೆಯವರಿಗೆ ಹೇಳುವದು ನಾಚಿಕೆಗೇಡು. ಇದು ಅಹಿಂಸೆಯ ಲಕ್ಷಣವಾಗಲಾರದು. ಜಾತೀಯ ದೊಂಬಿಗಳಲ್ಲಿ ನನ್ನ ಅಹಿಂಸೆಯನ್ನು ಒರೆಗೆ ಹಚ್ಚುವ ಅವಕಾಶ ನನಗೆ ಎಂದೂ ದೊರೆತಿಲ್ಲ. ಇಂಥ ಅವಕಾಶವನ್ನು ಕಲ್ಪಿಸಿಕೊಳ್ಳದಿರುವದು ನನ್ನ ಹೇಡಿತನವೆಂದು ವಾದಿಸಬಾರದು. ಅದೇನೇ ಇರಲಿ ದೇವರ ಇಚ್ಛೆ ಇದ್ದರೆ ಇನ್ನು ಮುಂದೆಯಾದರೂ ಅಂಥ ಅವಕಾಶ ಬರಬಹುದು. ನನ್ನನ್ನು ಅದರಲ್ಲಿ ಕೆಡಹಿ ಪರಮಾತ್ಮನನ್ನನ್ನು ವಿಶುದ್ಧಗೊಳಿಸುವನು ಮತ್ತು ಅಹಿಂಸಾ ಮಾರ್ಗವನ್ನು ಹೆಚ್ಚು ಸ್ಪಷ್ಟ ಮಾಡುವನು. ನನ್ನ ಪ್ರಾಣಾಹುತಿಯಿಂದ ಹಿಂಸೆಯು ಸದ್ದು ಅಡಗುವದೆಂದು ಯಾರೂ ಇದರ ಅರ್ಥ ಮಾಡಿಕೊಳ್ಳಬಾರದು. ಎಲ್ಲೆಲ್ಲಿಯೂ ಹಬ್ಬಿದ ಭೀಕರ ಹಿಂಸೆಯನ್ನು ತಡೆದು ಅದರ ಬದಲು ಅಹಿಂಸೆಯ ಸಾಮ್ರಾಜ್ಯ ನೆಲಸಬೇಕಾದರೆ ನನ್ನಂಥ ಅನೇಕರ ಪ್ರಾಣಾಹುತಿಯಾಗಬೇಕಾಗುವುದು.

"ಹರಿಯ ಮಾರ್ಗವೆ ಶೂರರ ಮಾರ್ಗವು, ಹೇಡಿಗಳ ಮಾರ್ಗವಲ್ಲ. ಹರಿಯ ಮಾರ್ಗವೆ ಅಹಿಂಸೆಯು ಮಾರ್ಗ'ವೆಂದು ಪ್ರೀತಮ ಕವಿಯು ಹಾಡಿರುವನು.

ಪಂಚಗಣಿ ಮೋ. ಕ. ಗಾಂಧಿ

೨೫—೭—೪೬

## ಉಪೋಷಣದಿಂದ ಆಗುವ ಲಾಭವೆಷ್ಟು ?

ಇಂಡೋನೇಶಿಯಾ ನಮಗೆ ೫೦,೦೦೦ ಟನ್ ಅಕ್ಕಿಕೊಡಲು ಒಪ್ಪಿದೆ.

= ೨೨೪೦× ⅓ ಲಕ್ಷ ಪೌಂಡು.

= ೧೧೨೦ ಲಕ್ಷ ಪೌಂಡು.

= ೧೧೨ ದಶಲಕ್ಷ ಪೌಂಡು.

ಪ್ರತಿಯೊಬ್ಬನಿಗೆ ದಿನಾಲು ೧ ಪೌಂಡಿನಂತೆ ೧೧೨ ದಶಲಕ್ಷ ಪ್ರೌಢರಿಗೆ ಇಷ್ಟು ಅಕ್ಕಿ ಸಾಕಾಗುವದು.

ಆದುದರಿಂದ ೧೧೨ ದಶಲಕ್ಷ ಜನರು ಒಂದು ದಿನ ಉಪವಾಸ ಮಾಡಿದರೆ ಇಂಡೋನೇಶಿಯಾದಿಂದ ೫೦ ಸಾವಿರ ಟನ್ ಅಕ್ಕಿ ಬಂದಂತೆಯೇ ಆಗುವದು.

### ಸೂಚನೆ

ತೀರವೃದ್ಧರು ಶಕ್ತಿಹೀನರು ಮತ್ತು ಕಾಯಪರಿಶ್ರಮ ಮಾಡುವವರು ಇವರನ್ನು ಬಿಟ್ಟುಗೊಟ್ಟು ಉಳಿದೆಲ್ಲ ಪ್ರೌಢರೂ ಶನಿವಾರ ಸಾಯಂಕಾಲ ಉಪೋಷಣ ಮಾಡತಕ್ಕದ್ದು.

ಹಿಂದುಸ್ತಾನದಲ್ಲಿ ೨೪೦ ದಶಲಕ್ಷ ಪ್ರೌಢರಿದ್ದು ಅವರಲ್ಲಿ ೮೦ ದಶಲಕ್ಷ ಜನ ಕಾಯ ಕಷ್ಟ ಮಾಡುವವರಿರುವರು.

ಆದುದರಿಂದ ಪ್ರತಿಯೊಬ್ಬ ಪ್ರೌಢ ಮನುಷ್ಯ ಶನಿವಾರ ಸಾಯಂಕಾಲ ಉಪೋಷಣ ಮಾಡುವದರಿಂದ ಸರಾಸರಿ ೮ ಔಂಸ ಧಾನ್ಯ ಉಳಿದರೆ ಇನ್ನುಳಿದ ೨೬ ವಾರುಗಳಲ್ಲಿ (ಕಾಯ ಪರಿಶ್ರಮದವರನ್ನು ಬಿಟ್ಟು) ಎಲ್ಲ ಪ್ರೌಢರು ೨೬ ಉಪೋಷಣಮಾಡಿದರೆ ೨೦೮೦ ದಶಲಕ್ಷ ಪೌಂಡು ಧಾನ್ಯದ ಉಳಿತಾಯವಾಗುವದು. ಅಂದರೆ ೦.೯೨ ದಶಲಕ್ಷ ಟನ್ ಧಾನ್ಯದ ಉಳಿತಾಯವಾಗುವದು.

ಆಗಬಹುದಾಗಿದ್ದ ಆಹಾರ ಕೊರತೆ ಇದರಿಂದ ಕಡಿಮೆಯಾಗುವದು. ಎಲ್ಲ ಪಕ್ಷಗಳು, ಎಲ್ಲ ಸರಕಾರಗಳು ಮತ್ತು ಎಲ್ಲ ವ್ಯಕ್ತಿಗಳು ಪತ್ರಿಕೆಗಳು ಮುಂತಾದವು ಶನಿವಾರ ಸಾಯಂಕಾಲ ಉಪೋಷಣ ಮಾಡಬೇಕೆಂದು ಪ್ರಚಾರ ಮಾಡಬೇಕು ದೇಶದ ಕೆಲ ಭಾಗಗಳಲ್ಲಿ ನಲಿಯುತಿರುವ ಉಪವಾಸದ ಬಳಲಿಕೆಯಲ್ಲಿ ಹಿಂದೀ ಜನತೆಯೆಲ್ಲ ಭಾಗವಹಿಸಿದ್ದಾದರೆ ಆಯಾ ಭಾಗದ ಜನರಿಗೆ ಆಹಾರ ಒದಗಿಸಿದಂತಾಗುತ್ತದೆ. ಈ ರೀತಿ ಉಪವಾಸದ ಬಳಲಿಕೆಯನ್ನು ತಪ್ಪಿಸಿದಂತಾಗುವದು. ಅಲ್ಲದೆ ಉಪವಾಸ ಮಾಡುವದರಿಂದ ಆರೋಗ್ಯ ಸುಧಾರಣೆಯೂ ಆಗುವದು.

ಈ ಪ್ರಚಾರದಿಂದ ನೂರಕ್ಕೆ ೧೦ ರಷ್ಟಾದರೂ ಯಶಸ್ಸು ಸಿಕ್ಕರೆ ೯೨೦೦೦ ಸಾವಿರ ಟನ್ ದಷ್ಟು ಧಾನ್ಯ ಉಳಿಯುವದು. ಇಂಡೋನೇಶಿಯದವರು ಕೊಡುವೆವೆಂದು ಹೇಳಿದ್ದಕ್ಕಿಂತ ಬಹಳ ಹೆಚ್ಚು ಧಾನ್ಯವುಳಿದಂತಾಗುವುದು. ಈ ೯೨೦೦೦ ಟನ್ ಧಾನ್ಯ ದೇಶಕ್ಕೆ ಯಾವದೇ ಬಗೆಯ ವೆಚ್ಚವಾಗಲದೆ ಉಳಿಯುವವು. ಇದರಿಂದ ಒಟ್ಟರೆ ಆಹಾರ ಧಾನ್ಯ ಉಳಿಯುವದಲ್ಲದೆ ಪ್ರತಿಯೊಂದು ಕುಟುಂಬದವೆಚ್ಚದಲ್ಲಿಯೂ ಉಳಿತಾಯವಾಗುವದು.

## ಪ್ರಶ್ನ—ಪೆಟ್ಟಿಗೆ

ಪ್ರಶ್ನೆ— ಕಾಂಗ್ರೆಸ್ಸು ಬ್ರಿಟಿಶ ಸರಕಾರದೊಡನೆ ಅಹಿಂಸಾತ್ಮಕ ಹೋರಾಟ ನಡೆಸಿದೆ. ಕಾಂಗ್ರೆಸ್ಸಿಗರು ಅಧಿಕಾರದಲ್ಲಿ ಬಂದರೆ ಅಡ್ಡಹಾದಿ ಹಿಡಿದು ಮತ್ತು ಗೊಂದಲ ಹಾಕುತಿರುವ ತಮ್ಮ ಸ್ವಂತ ಬಂಧುಗಳ ಮೇಲೆ ಗುಂಡು ಹಾಕುವದು ಇದು ನ್ಯಾಯ್ಯವೇ ? ದೊಂಬಿಗಳನ್ನು ಅಹಿಂಸಾತ್ಮಕವಾಗಿ ಹತ್ತಿಕ್ಕಲು ಅಧಿಕಾರದಲ್ಲಿದ್ದ ಕಾಂಗ್ರೆಸ್ಸಿಗರಿಗೆ ತಮ್ಮ ಪ್ರಾಣವನ್ನು ಅರ್ಪಿಸಲು ಧೈರ್ಯವಿಲ್ಲದಿದ್ದರೆ ರವಿಶಂಕರ ಮಹಾರಾಜ ಮತ್ತು ಸಾನೆ ಗುರೂಜಿಯಂಥ ಕೆಲ ವ್ಯಕ್ತಿಗಳನ್ನು ಬಿಟ್ಟರೆ ಉಳಿದ ಕಾಂಗ್ರೆಸ್ಸಿಗರೆಲ್ಲರ ಅಹಿಂಸೆ ಕೇವಲ ಅಶಕ್ತರ ಅಹಿಂಸೆಯೆಂದು ಅರ್ಥವಾಗುವುದಿಲ್ಲವೆ?

ಉತ್ತರ:— ನೀವು ಎತ್ತಿದ ಹಿಂಸೆ ಮತ್ತು ಅಹಿಂಸೆಯ ಪ್ರಶ್ನೆ ಹಳೆಯ ಪ್ರಶ್ನೆ. ಈ ಸಂದರ್ಭದಲ್ಲಿ ನಾನು ಎಷ್ಟೋ ಹೇಳಿರುವೆ. ಉಳಿದವರಂತೆ ನಿಮಗೂ ಅಹಿಂಸೆ ಮನದಲ್ಲಿ ನಾಟದಿದ್ದರೆ ನೀವು ಅದನ್ನು ಬಿಟ್ಟುಗೊಡತಕ್ಕದ್ದು. ಅದಕ್ಕಾಗಿ ನಾವೇನು ನಿಮ್ಮ ಮೇಲೆ ದೋಷಾರೋಪ ಮಾಡುವದಿಲ್ಲ. ಎರಡನೆಯವರ ಆರೋಪಿಸಿದರೆ ನೀವು ಅತ್ತ ಲಕ್ಷಗೊಡತಕ್ಕದ್ದಲ್ಲ ತತ್ವವಿಷ್ಟೆ. "ಋಷಿಪ್ರಣೀತ ಹಾಗು ಆಚರಿಸಲಾಗುವ ತತ್ವವು ತಮ್ಮ ಹೃದಯದಲ್ಲಿ ನಾಟುವದೋ ಅದನ್ನು ಅನುಸರಿಸಿ ಆಚರಿಸುತ್ತ ಹೋಗಬೇಕು.' ಆದರೆ ತಮಗೆ ಸರಿಯೆನಿಸುವ ತತ್ವಗಳು ಋಷಿ ಪ್ರಣೀತ ಮತ್ತು ಆಚರಿತ ತತ್ವಗಳಿಗೆ ವಿರುದ್ಧವಾಗಿರುವ ಸಂದರ್ಭದಲ್ಲಿ ಏನು ಮಾಡಬೇಕೆಂಬ ಪ್ರಶ್ನೆ ಉದ್ಭವಿಸುತ್ತದೆ. ಇಂಥ ಸಂದರ್ಭಗಳಲ್ಲಿ ಆಯಾ ವ್ಯಕ್ತಿ ತನ್ನ ಮನದೊಲವಿನಂತೆ ಆಚರಿಸತಕ್ಕದ್ದು. ಮತ್ತು ಅದರ ಗಂಡಾಂತರಗಳನ್ನೂ ಅನುಭವಿಸಲು ಸಿದ್ಧನಾಗಬೇಕು. ಅನೇಕ ಸುಧಾರಣೆಗಳು ಮತ್ತು ಸಂಶೋಧನೆಗಳು ಇದೇ ರೀತಿಯಿಂದ ರೂಢಿಯಲ್ಲಿ ಬಂದಿವೆ ನಮ್ಮ ಶಂಕರಾಚಾರ್ಯರು ಅಸ್ಪೃಶ್ಯತೆಗೆ ಮನ್ನಣೆ ಕೊಟ್ಟಿರುತ್ತಾರೆ. ಆದರೆ ನಮ್ಮ ವಿವೇಕ ಮತ್ತು ಹೃದಯಗಳೆರಡೂ ಅಸ್ಪೃಶ್ಯತೆ ಹಿಂದೂ ಧರ್ಮಕ್ಕೆ ಕಲಂಕಪ್ರಾಯವಾಗಿದೆಂದು ಹೇಳುತ್ತವೆ. ನಮ್ಮ ವಿಶ್ವಾಸ ತಪ್ಪಾದುದಿದೆಂದು ಎರಡನೆಯವರು ಭಾವಿಸಿದರೆ ನಾವತ್ತ ಗಮನಿಸುವದಿಲ್ಲ.

ಪ್ರಶ್ನೆ:— ೧೯೨೦ ನೆ ಇಸ್ವಿಯಿಂದ ನೀವು ಬ್ರಿಟಿಶ ಸರಕಾರದ ಅಧಿಕಾರಿಗಳು ರಾವಣನ ಸೈನಿಕರೆಂದು ಪ್ರತಿಪಾದಿಸುತ್ತ ಬಂದಿರುವಿರಿ. ಕಾಂಗ್ರೆಸ ಸರಕಾರದವರು ಈ ಅಸ್ತ್ರಗಳ ಉಪಯೋಗವನ್ನೇ ಮಾಡುತಿರುವರು. ಸಂಶಯದ ಮೇಲೆ ಸೆರೆಹಿಡಿಯಲ್ಪಟ್ಟ ಕೈದಿಯನ್ನು ಹೊಡೆಯುವದು ಅಪರಾಧವೆಂದು ಬ್ರಿಟಿಶ ಸರಕಾರದವರ ಕಾಯಿದೆಗಳೇ ಹೇಳುತ್ತವೆ, ಯಾವದೊಂದು ಅಪರಾಧದ ಕಬೂಲಿ ಜವಾಬು ಪಡೆಯಲು ಅವನನ್ನು ಬೆದರಿಸುವದಕ್ಕಾಗಿ ಕೈದಿಯನ್ನು ಹೊಡೆಯುವದು ತಪ್ಪೆಂದು ಕಾಯಿದೆ. ೧೯೪೨ ನೇ ಇಸ್ವಿಯ ಕ್ರಾಂತಿಯಲ್ಲಿ ನನ್ನಂತೆ ಅನೇಕರು ಬಂಧಿತರಾದ ಕೂಡಲೆ ಒಳಿತಾಗಿ ಥಳಿಸಲ್ಪಟ್ಟರು. ಈ ರೀತಿಯ ಪೋಲೀಸರ ಅತ್ಯಾಚಾರದ ಬಗ್ಗೆ ಕಾಂಗ್ರೆಸ ಸರಕಾರದವರು ವಿಚಾರಣೆ ನಡೆಸುವದು ಕರ್ತವ್ಯವಾಗಿಲ್ಲವೆ ?

ಉತ್ತರ:— ಬ್ರಿಟಿಶ ಸರಕಾರವನ್ನು ನಾನು ಕಟುವಾಗಿ ಟೀಕಿಸಿದ್ದೇನೆ. ಈಗಲೂ ಟೀಕಿಸುತ್ತೇನೆ. ಬ್ರಿಟಿಶ ಸರಕಾರದಲ್ಲಿದ್ದ ಎಲ್ಲ ಪೋಲೀಸ ಅಧಿಕಾರಿಗಳು ಅವಶ್ಯವಾಗಿ ರಾಕ್ಷಸರ ಶಿಷ್ಯರೇ ಆಗಲಿಕ್ಕೆಬೇಕೆಂದು ಇದರ ಅರ್ಥವಲ್ಲ. ಕಾಂಗ್ರೆಸ ಸರಕಾರದ ಅಧೀನದಲ್ಲಿ ಬಂದ ಬಳಿಕವೂ ಅವರು ಹಾಗಿರಲಿಕ್ಕೆಬೇಕೆಂದು ಇದರರ್ಥವಾಗುವುದಿಲ್ಲ. ೧೯೪೨ ರ ಇಲ್ಲವೆ ಅದಕ್ಕೂ ಮೊದಲಿನ ಪೋಲೀಸ ಅತ್ಯಾಚಾರಗಳ ಬಗ್ಗೆ ಕಾಂಗ್ರೆಸ ಸರಕಾರದವರಿಗೆ ವಿಚಾರಣೆ ನಡೆಸಲು ಇರುವ ಹಕ್ಕನ್ನು ಯಾರೂ ಆಕ್ಷೇಪಿಸಿಲ್ಲ. ಆದರೆ ಇಂಥ ಹಕ್ಕುಬಾಧ್ಯತೆಗಳನ್ನು ಉಪಯೋಗಿಸುವದು ವಿರಳ. ಇಂಥ ಕೆಲವೊಂದು ಹಕ್ಕುಬಾಧ್ಯತೆಗಳ ಉಪಯೋಗ ಮಾಡಿಕೊಳ್ಳದಿರುವುದೇ ಅನೇಕ ಸಲ ಜಾಣತನದ್ದೆನಿಸುವದೆಂಬುದು ನಮಗೆ ಗೊತ್ತುಂಟು. ನೀವು ಹೇಳಿದ ಅತ್ಯಾಚಾರಗಳ ಬಗ್ಗೆ ವಿಚಾರಣೆ ನಡೆಸದಿರುವ ಸಾಮಾನ್ಯ ಧೋರಣವನ್ನು ಕಾಂಗ್ರೆಸ್ಸು ಇಟ್ಟುಕೊಂಡಿದೆ. ಅನೇಕ ಸಂದರ್ಭಗಳಲ್ಲಿ ಇಂಥ ಅಪರಾಧಗಳನ್ನು ಸಿದ್ಧ ಮಾಡುವದು ಕಠಿನವೆಂಬುದನ್ನು ನೀವು ತಿಳಿಯತಕ್ಕದ್ದು. ನಿಶ್ಚಿತ ಅಪರಾಧಗಳಿದ್ದಲ್ಲೆಲ್ಲ ಈ ಬಗೆಯ ವಿಚಾರಣೆಯ ಹಕ್ಕನ್ನು ಉಪಯೋಗಿಸಲಾಗಿದೆಂದು ನನಗನಿಸುತ್ತದೆ. ಆದರೆ ಕಾಂಗ್ರೆಸ ಮಂತ್ರಿಗಳ ಕೃತಿಯು ನ್ಯಾಯ ನಿರ್ಣಯ ಮಾಡುವದು ಬೇಡೆಂದು ನನ್ನ ಸಲಹೆ. ಕಾಂಗ್ರೆಸ್ಸು ಅಧಿಕಾರ ಸ್ವೀಕರಿಸಿ ಜಾಣತನವನ್ನು ಮಾಡಿತೆಂಬ ವಿಶ್ವಾಸ ಸಾಕು.

ಪಂಚಗಣಿ ಮೋ. ಕ. ಗಾಂಧಿ

೨೫-೭-೧೯೪೬ ( ಹರಿಜನಬಂಧುವಿನಿಂದ )

## ನೈಸರ್ಗಿಕ ಚಿಕಿತ್ಸೆ ಮತ್ತು ಆಧುನಿಕ ಚಿಕಿತ್ಸೆ

ಪ್ರಶ್ನೆ:— ನಿಮ್ಮ ನೈಸರ್ಗಿಕ ಚಿಕಿತ್ಸಾಶಾಸ್ತ್ರದಲ್ಲಿ ಕೆಳಗಿನ ವಿಷಯಗಳಿಗೆ ಅವಕಾಶವಿರುವದೋ?

೧) ವ್ಯಾಧಿನಿದಾನಕ್ಕಾಗಿ ಸೂಕ್ಷ್ಮದರ್ಶಕ ಯಂತ್ರ, ಕ್ಷ ಕಿರಣಗಳು ಮೊದಲಾದವುಗಳು.

೨) ಮಲೇರಿಯಾದಲ್ಲಿ ಕ್ವಿನೀನ, ಆಮಾಂಶದಲ್ಲಿ ಎಮೆಟಿನ್, ನೆಮೋನಿಯಾದಲ್ಲಿ ಪೆನ್ಸಿಲಿನ್ ಮೊದಲಾದ ವಿಶಿಷ್ಟ ಬೇನೆಗಳಿಗೆ ವಿಶಿಷ್ಟ ಔಷಧಗಳನ್ನು ಕೊಡುವುದರಿಂದ ೧೦೦ ಕ್ಕೆ ೭೫ ರಷ್ಟು ಗುಣವಾದುದು ಕಂಡುಬಂದಿದ್ದರಿಂದ ಅವುಗಳ ಉಪಯೋಗ.

೩) ವೈಯಕ್ತಿಕ ಸ್ವಚ್ಛತೆ ಆರೋಗ್ಯ ಮತ್ತು ಸ್ವಚ್ಛತೆ, ಬೇನೆಗಳನ್ನು ಪ್ರತಿಬಂಧಿಸುವದು ಮೊದಲಾದವುಗಳ ಬಗ್ಗೆ ಜನತೆಗೆ ಸಲಹೆ ಸೂಚನೆಗಳನ್ನು ಕೊಡುವದು.

ಉತ್ತರ:— ನನ್ನ ನೈಸರ್ಗಿಕ ಚಿಕಿತ್ಸೆ ಹೆಚ್ಚಾಗಿ ಹಳ್ಳಿಗರಿಗಾಗಿ ಮತ್ತು ಹಳ್ಳಿಗಳಿಗಾಗಿ ಇದೆ. ಆದುದರಿಂದ ಅದರಲ್ಲಿ ಸೂಕ್ಷ್ಮದರ್ಶಕ ಯಂತ್ರ, ಕ್ಷಕಿರಣಗಳು ಮತ್ತು ಅಂಥ ವಸ್ತುಗಳಿಗೆ ಅವಕಾಶವಿರುವುದಿಲ್ಲ ಕ್ವಿನಾಯಿನ್, ಎಮೆಟಿನ್ ಮತ್ತು ಪೆನ್ಸಿಲಿನ ಮೊದಲಾದ ಔಷಧಗಳಿಗೆ ನೈಸರ್ಗಿಕ ಚಿಕಿತ್ಸೆಯಲ್ಲಿ ಅವಕಾಶವಿರುವುದಿಲ್ಲ. ವೈಯಕ್ತಿಕ ಆರೋಗ್ಯ ರಕ್ಷಣೆ ಮತ್ತು ನಿರೋಗಿಯಾಗಿರುವುದು ಅತ್ಯಂತ ಮಹತ್ವದ್ದು. ಇವಿಷ್ಟೆ ಸಾಕು. ಪ್ರತಿಯೊಬ್ಬ ಇವುಗಳಲ್ಲಿ ಪರಿಪೂರ್ಣನಾದರೆ ಬೇನೆಗಳೇ ಬರುವದಿಲ್ಲ. ಇಷ್ಟಾದರೂ ಬೇನೆ ಬಂದುದಾದರೆ ನಿಸರ್ಗ ನಿಯಮಗಳನ್ನೆಲ್ಲ ಪಾಲಿಸುತ್ತ ಹೋದರೂ ರಾಮನಾಮ ಪಠನವು ಎಲ್ಲಕ್ಕೂ ರಾಮಬಾಣ ಉಪಾಯವಾಗಿದೆ. ಆದರೆ ರಾಮನಾಮ ಪಠಣದಿಂದ ಬೇನೆವಾಸಿಯಾಗುವದು ಕ್ಷಣಾರ್ಧದಲ್ಲಿ ಸಾರ್ವತ್ರಿಕವಾಗಲಾರದು. ರೋಗಿಗೆ ರಾಮನಾಮ ಪಠನದಲ್ಲಿ ವಿಶ್ವಾಸವನ್ನು ಹುಟ್ಟಿಸಬೇಕಾದರೆ ಆ ವೈದ್ಯನು ರಾಮನಾಮದ ಮೂರ್ತಿಮಂತ ಶಕ್ತಿಯಾಗಿರಬೇಕು. ಅದೇ ಕಾಲಕ್ಕೆ ಪಂಚಭೂತಗಳಿಂದ ಸಿಕ್ಕಬಹುದಾದ ಎಲ್ಲವನ್ನು ಉಪಯೋಗಿಸತಕ್ಕದ್ದು. ಪಂಚಭೂತಗಳೆಂದರೆ ಪೃಥ್ವಿ, ಅಪ್, ತೇಜ, ವಾಯು, ಆಕಾಶ. ನೈಸರ್ಗಿಕ ಚಿಕಿತ್ಸೆಯ ಮರ್ಯಾದೆಯಿದೆಂದು ನನ್ನ ಭಾವನೆ. ಆದುದರಿಂದ ಉರುಳಿಕಾಂಚನದಲ್ಲಿ ನಾನು ಹಳ್ಳಿಗರಿಗೆ ಸ್ವಚ್ಛ ಹಾಗು ನಿರೋಗಿ ಜೀವನವನ್ನೆಂತು ಸಾಗಿಸಬೇಕೆಂಬ ಶಿಕ್ಷಣವನ್ನು ಕೊಡುವುದಲ್ಲದೆ ಪಂಚಭೂತಗಳ ಸಹಾಯದಿಂದ ರೋಗಿಗಳ ಚಿಕಿತ್ಸೆ ಮಾಡಬೇಕೆಂಬದನ್ನು ಕಲಿಸಲಾಗುತ್ತದೆ. ಇದೇ ನನ್ನ ಅಲ್ಲಿನ ಪ್ರಯೋಗ. ಅವಶ್ಯವೆನಿಸಿದರೆ ಅಲ್ಲಿ ಬೆಳೆಯುತಿರುವ ಬೇನೆ ವಾಸಿಮಾಡುವ ವನಸ್ಪತಿಗಳನ್ನುಪಯೋಗಿಸಬಹುದು. ನೈಸರ್ಗಿಕ ಚಿಕಿತ್ಸೆಯಲ್ಲಿ ಪಥ್ಯಾಹಾರವು ಅವಶ್ಯವೆಂಬುದನ್ನು ಬೇರೆ ಹೇಳಬೇಕಿಲ್ಲ.

ಉರುಳಿಕಾಂಚನ ಮೋ. ಕ. ಗಾಂಧಿ

೨-೮-೧೯೪೬

(ಹರಿಜನ ಬಂಧುವಿನಿಂದ)



# ಕ ರ್ನಾ ಟ ಕ

### ಧಾರವಾಡ

ನವಲಗುಂದದಲ್ಲಿ ಶ್ರೀ ವ್ಹಿ. ಎಲ್. ಸರದೇಸಾಯಿ ಇವರ ಅಧ್ಯಕ್ಷತೆಯಲ್ಲಿ ಹೊಲದೊಡೆಯರ ಸಂಘವೊಂದು ಸ್ಥಾಪಿತವಾಗಿದೆ. ಅವರು ಸಭೆ ಸೇರಿ ಹೊಲಸಾಗುವಳಿ ತಿದ್ದುಪಡಿ ಮಸೂದೆ ಅನ್ಯಾಯದ್ದು, ಒಡೆಯರು ಹಾಗು ರೈತರಲ್ಲಿ ಬಡಿದಾಟ ಹುಟ್ಟಿಸುವಂಥದು ಇರುತ್ತದೆಯಾದ್ದರಿಂದ ಅದನ್ನು ರದ್ದುಪಡಿಸಬೇಕೆಂದು ಮುಂತಾಗಿ ಗೊತ್ತುವಳಿ ಸ್ವೀಕರಿಸಿದರು.

ಧಾರವಾಡ ಜಿಲ್ಹಾ ಸ್ಕೂಲಬೋರ್ಡಿನ ಅಧೀನದಲ್ಲಿರುಗಿರುವ ತೋಟಕ್ಕೆ ಕಿತ್ತೂರ ಚನ್ನಮ್ಮರಾಣಿ ತೋಟವೆಂದು ಹೆಸರಿಟ್ಟಿದ್ದಾರೆ.

ರಂಭಾಪುರಿ (ಬಾಳೇಹಳ್ಳಿ) ಸಿಂಹಾಸನಾಧೀಶ್ವರ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಬೆಂಗಳೂರಲ್ಲಿ ೧ ನೇ ತಾರೀಕು ಲಿಂಗೈಕ್ಯರಾದರು. ಬೆಂಗಳೂರಿನ ಶ್ರೀ ಗಂಗಾಧರ ಶಿವಾಚಾರರನ್ನು ಉತ್ತರಾಧಿಕಾರಿಗಳನ್ನಾಗಿ ಮಾಡಿದ್ದಾರೆ.

ಹುಬ್ಬಳ್ಳಿ ಮುನಿಸಿಪಾಲಿಟಿ ಅಟ್ಟದ ಮೇಲೆ ರವಿವಾರ ೪ ನೇ ತಾರೀಕು ಸಾಯಂಕಾಲ ಪ್ರೊ. ಜಾಗಿರದಾರರ ಅಧ್ಯಕ್ಷತೆಯಲ್ಲಿ ಪ್ರಗತಿಶೀಲ ಸಂಘದ ಪರವಾಗಿ ಸಭೆ ಸೇರಿ ನಮಗಿಂದು ಬೇಕಾದ ಸಾಹಿತ್ಯದ ಬಗ್ಗೆ ವಿಚಾರ ಸಂಕಿರಣ ನಡೆಯಿತು. ಹಳಕಟ್ಟಿ ಚಿಂತಾಮಣಿರಾವ, ಡಾ. ಗೋಪಾಲಕೃಷ್ಣರಾವ, ನರೇಗಲ್ಲ ಪ್ರಲ್ಹಾದರಾವ, ನಾಯಕ ವೆಂಕಟರಾವ, ದ. ಬಾ. ಕುಲಕರ್ಣಿ, ಕುಳಕುಂದ ಶಿವರಾವ ಮೊದಲಾದವರು ಬೇರೆ ಬೇರೆ ವಿಷಯಗಳ ಮೇಲೆ ಮಾತಾಡಿದರು.

ನೀರಾವರಿ ಸಲುವಾಗಿ ಪೆಟ್ರೋಲ ಪಂಪು ಬಂದು ಹಣ್ಣೂರು ಧರ್ಮಶಾಲೆಯಲ್ಲಿ ಜಂಗುತಿನ್ನುತ್ತ ಬಿದ್ದು ೬ ತಿಂಗಳಾದವು. ಅದರ ಉಪಯೋಗ ಜನರಿಗೇನೂ ಆಗಿಲ್ಲ ಅಧಿಕಾರಿಗಳು ಇತ್ತ ಗಮನಿಸುವರೊ?

ಹುಬ್ಬಳ್ಳಿ ಶ್ರೀ ಯಲ್ಲೂಬಾಯಿ ಬೆಣಗಿ ಇವರು ೨೦೦೦ ರೂಪಾಯಿಗಳ ಬೆಲೆಬಾಳುವ ತಮ್ಮ ೩೪ ಗುಂಟೆ ಸ್ಥಳವನ್ನು ಹರಿಜನ ವಿದ್ಯಾವರ್ಧಕ ಸಂಘಕ್ಕೆ ದಾನವಾಗಿ ಕೊಟ್ಟಿದ್ದಲ್ಲದೆ ಕಟ್ಟಡ ಕಟ್ಟುವ ಕಾಲಕ್ಕೆ ಸಾಕಷ್ಟು ಧನಸಹಾಯ ಮಾಡಲು ಆಶ್ವಾಸನವಿತ್ತಿರುವರು.

### ವಿಜಾಪುರ

ತಾಳೀಕೋಟೆಯ ವ್ಯಾಪಾರಸ್ಥರು ನಾಗರಪಂಚಮಿಗೆ ಯಾರಿಗೂ ಬೆಲ್ಲ ಕೊಡಲಿಲ್ಲ. ಕಳ್ಳಪೇಟಿ ಮೂಲಕ ೧೨ ರೂಪಾಯಿಗೆ ೧ ಮಣದಂತೆ ಮಾರಾಟ ಮಾಡಿದ್ದಾರೆ. ಮೇಲಧಿಕಾರಿಗಳು ತನಿಖೆ ಮಾಡಿದರೆ ಸಾಕ್ಷಿ ಕೊಡಲಿಕ್ಕೆ ಸಿದ್ಧರಿದ್ದೇವೆಂದು ಮುಂತಾಗಿ ಅಲ್ಲಿಯ ಪ್ರಮುಖರು ಸಹಿ ಮಾಡಿ ತಿಳಿಸಿದ್ದಾರೆ.

ವಿಜಾಪುರದಲ್ಲಿ ಶ್ರೀ ಆರ್ ಬಿ ಬಾಗಲಕೋಟೆಕರ ಇವರ ಮನೆಯಲ್ಲಿ ಹೊಲದೊಡೆಯರ ಸಭೆ ಸೇರಿ ಹೊಲ ಸಾಗುವಳಿ ಕಾಯದೆಯ ಸವಿಸ್ತರ ಚರ್ಚೆಯಾಯಿತು. ಶ್ರೀ ಎಸ್. ಪಿ. ದೇಸಾಯಿ (ಚೆಅರ್ಮನ್) ದಿ. ಬ. ಜಿ. ಕೆ. ದೇಸಾಯಿ ಕೆ. ಆರ್. ದೇಶಪಾಂಡೆ ಆರ್ ಎಸ್ ದೇಶಪಾಂಡೆ ಎಸ್ ಬಿ ಜಾಗೀರದಾರ ಗಣಪತಚಂದ ಶಹಾ ಇವರ ಉಪಸಮಿತಿಯನ್ನು ನಿಯಮಿಸಲಾಯಿತು. ಅವರು ೩ ದಿನಗಳಲ್ಲಿ ವರದಿ ಒಪ್ಪಿಸಬೇಕೆಂದು ಗೊತ್ತಾಗಿದೆ.

ವಿಜಾಪುರ ಮಾಮಲೇದಾರ ಕಚೇರಿಯ ಕಾರಕೂನ ಶ್ರೀ ಸಾಯಗಾವಿಯವರು ಸಕ್ಕರೆ ಮತ್ತು ಚಿಮಣಿ ಎಣ್ಣಿಯ ಪರವಿಟ್ಟುಗಳ ಖೊಟ್ಟಿ ಲೆಕ್ಕ ಇಟ್ಟಿದ್ದನೆಂಬ ಆರೋಪದ ಮೇಲೆ ಜಿಲ್ಹಾ ಸೆಶನ್ಸ ಜಡ್ಜರು ಅವರಿಗೆ ೩ ವರ್ಷ ಕಠಿನ ಶಿಕ್ಷೆ ವಿಧಿಸಿದರು.

ಬಾಗಿಲಕೋಟೆಯಲ್ಲಿ ೧೯೪೪ ರಲ್ಲಿ ಶಿವಲಿಂಗಪ್ಪ ಸಿಡೋಣಿ ಎಂಬವರನ್ನು ರಾತ್ರಿ ತಡೆದು ಲಂಚ ಕೇಳಿದಾಗ ಕೊಡದಿರಲು ಕೆಲವು ಪೋಲೀಸರು ಅವರನ್ನು ಹೊಡೆದು ಕಚೇರಿಯ ಹತ್ತರ ಒಯ್ದರೆಂಬ ಆರೋಪ ಸಿದ್ಧವಾಗಿ ಅಬ್ದುಲ್ ರಾಜೇಸಾಹೇಬ ಮತ್ತು ಫಕೀರಪ್ಪ ಅಗಸರ ಇವರಿಗೆ ೧೦೨ ರೂ. ದಂಡ ಕೊಡದಿದ್ದರೆ ಮೂರು ತಿಂಗಳ ಕಠಿಣ ಶಿಕ್ಷೆ ವಿಧಿಸಲಾಯಿತು. ಇನ್ನು ಮೂರು ಜನರು ಬಿಡುಗಡೆ ಹೊಂದಿದರು. ಸಿಡೋಣಿಯವರಿಗೆ೧೦೦ ರೂಪಾಯಿ ಪರಿಹಾರ ಕೊಡಿಸಲಾಗಿದೆ

ಶಾಂತತಾ ಭಂಗ ಮಾಡಿದರೆಂದು ಪೋಲೀಸರು ಸಿಡೋಣಿ ಮೇಲೆ ಹಾಕಿದ ಖಟ್ಲೆಯನ್ನು ಕಿತ್ತೊಗೆಯಲಾಯಿತು.

ವಿಜಾಪುರದ ಅಸಿಸ್ಟಂಟ ಸಪ್ಲಾಯ ಅಫೀಸರರಾದ ಶ್ರೀ ಜಿ ಎಂ ದೇಶಪಾಂಡೆಯವರನ್ನು ಲಂಚದ ಆರೋಪದ ಮೇಲೆ ಸಸ್ಪೆಂಡ ಮಾಡಲಾಗಿದೆ.

### ಬೆಳಗಾವಿ

ಕಿತ್ತೂರ ಚನ್ನಮ್ಮರಾಣಿ ಇತಿಹಾಸ ಮಂಡಲದವರು ಐತಿಹಾಸಿಕ ಸಂಗ್ರಹದ ಕೆಲಸಕ್ಕಾಗಿ ತಿರುಗಾಡುವಾಗ ಕದಂಬರಾಜರ ಕಾಲದ ತಾಮ್ರಪಟ ಸಿಕ್ಕಿದೆ. ಇವು ಮೂರು ಪಟಗಳಿದ್ದು ಪ್ರತಿಯೊಂದು ೧—೧॥ ಫೂಟು ಇದೆ. ಬರಹ ೮೨ ಸಾಲು ಇಷ್ಟು ಸ್ವಚ್ಛ ಇದೆ ಪೂರ್ವಕಾಲೀನ ಪಾಲೀ ಭಾಷೆಯಲ್ಲಿ ಬರೆಯಲಾಗಿದೆ. ಮೂರೂ ಪಟಗಳನ್ನು ಕೂಡಿಸಲಾಗಿದೆ. ಮಂಡಲದವರು ಪಂಡಿತರ ಗಮನಕ್ಕೆ ಈ ಪಟವನ್ನು ತಂದು ವಿಷಯವನ್ನು ಪ್ರಸಿದ್ಧಿಸಲಿರುವರು. ಟೀಪುವಿನ ಕಾಲದ ಹಳೇ ಕಾಗದಗಳೂ ಸಿಕ್ಕಿವೆ.

ಮುಂಬಯಿ ಸರಕಾರದವರು ಖಾನಾಪುರದಲ್ಲಿ ಕುಂಬಾರಿಕೆಯ ಪ್ರಯೋಗಶಾಲೆಯೊಂದನ್ನು ತೆರೆದು ೧೦ ಅನುವಂಶಿಕ ಕುಂಬಾರ ವಿದ್ಯಾರ್ಥಿಗಳಿಗೆ ೧೫ ರೂ. ಗಳಂತೆ ವಿದ್ಯಾರ್ಥಿ ವೇತನ ಕೊಡಲಿದ್ದಾರೆ ಇದರ ಲಾಭ ಪಡೆಯಬಯಸುವವರು ಕುಂಬಾರ ಕಲಾವರ್ಧಕ ಸಂಘ ಧಾರವಾಡ ಇವರಿಗೆ ಬರೆದುಕೊಳ್ಳಬೇಕು. ಈ ಸಾಲೆಯಲ್ಲಿ ಕಲಿಸಲು ಗುಜರಾಥಿಗಳನ್ನು ತರಲಿದ್ದಾರಂತೆ. ಕರ್ನಾಟಕದಲ್ಲಿ ಜಾಣರಿಲ್ಲವೋ ಎಂದು ಒಬ್ಬರು ಕೇಳುವರು.

ಶ್ರೀ ಜಿ. ಎಂ. ಭಾತಖಂಡೆಯವರು ಬೆಳಗಾವಿ ನಗರಸಭೆಯ ಅಧ್ಯಕ್ಷರಾಗಿ ಆರಿಸಲ್ಪಟ್ಟರು.

ಬೆಳಗಾವಿಯ ಮಿಲಿಟರಿ ಹವಾಲದಾರ ಮರಕುಟ್ಟಿ ಎಂಬವರು ಚಹಾದ ಅಂಗಡಿ ಎದುರಿಗಿನ ಸೈಕಲ್ಲುಗಳನ್ನು ಅಪಹರಿಸಿ ಮಾರುತ್ತಿದ್ದರೆಂಬ ಆರೋಪದ ಮೇಲೆ ಬಂಧಿಸಲ್ಪಟ್ಟಿರುವರು. ಈ ವರೆಗೆ ಕಳೆದು ಹೋದ ೪ ಸಾಯಕಲ್ಲುಗಳು ದೊರೆತಿರುವವು.

ಅಕ್ಕತಂಗೇರ ಹಾಳದ ಬಾಳಪ್ಪನೆಂಬ ವ್ಯಸನಾಧೀನ ಮನುಷ್ಯನು ತನ್ನ ಹೆಂಡತಿಯ ಕುತ್ತಿಗೆ ಹಿಚುಕಿ ಸಮೀಪದಲ್ಲಿಯ ಬಾವಿಯಲ್ಲಿ ನೂಕಿದನು. ಅದರಂತೆ ಮೂವರು ಮಕ್ಕಳನ್ನು ಚಲ್ಲಿದನು. ಒಬ್ಬ ಹೆಣ್ಣುಮಗಳು ಮತ್ತು ಗಂಡುಮಗ ಆಧಾರ ಹಿಡಿದುಕೊಂಡು ಬದುಕಿದರು. ಜನರು ಸಪ್ಪಳವನ್ನು ಕೇಳಿ ಬಂದು ಬಾವಿಯೊಳಗಿಂದ ಅವರನ್ನು ತೆಗೆದು ಹೆಂಡತಿ ಮತ್ತು ಒಂದು ಮಗು ಪ್ರಾಣಕ್ಕೆರವಾದವು. ಬಾಳಪ್ಪನನ್ನು ಬಂಧಿಸಲಾಗಿದೆ.

೧೨ ನೇ ತಾರೀಕಿಗೆ ಮುರಗೋಡ ಮಹಾಲಿನ ೫೩ ಹಳ್ಳಿಗಳ ವಾಲೀಕಾರ ಸನದಿಯರ ಸಭೆ ಕೂಡಲಿದೆ. ಆ ಕಾಲಕ್ಕೆ ಸನದಿಯರ ಸಂಘ ಸ್ಥಾಪಿಸಲಾಗುವದು. ತಮ್ಮ ಹಕ್ಕುಬಾಧ್ಯತೆ ಮತ್ತು ಸವಲತ್ತುಗಳಿಗಾಗಿ ಹೋರಾಡುವದೆ ಸಂಘದ ಗುರಿ.

ಮುನವಳ್ಳಿ ವ್ಯಾಪಾರಿ ಸಂಘದ ಸಭೆ ಸೇರಿ ಸಂಘಕ್ಕೆ ೧೦೦೦ ರೂಪಾಯಿ ಕೂಡಿಸಬೇಕೆಂದು ಗೊತ್ತಾಯಿತು. ಸಭೆಯಲ್ಲಿಯೇ ೭೧೦ ರೂ. ಗಳು ಕೂಡಿದವು.

### ಬಳ್ಳಾರಿ

ಬಳ್ಳಾರಿ ವಿದ್ಯಾರ್ಥಿ ಕಾಂಗ್ರೆಸ್ಸಿನ ಸಭೆ ಸೇರಿ ೨೬ ನೆಯ ಜನೆವರಿ, ಅಗಸ್ಟ ೯, ಅಕ್ಟೋಬರ ೩ ಮೊದಲಾದ ದಿನಗಳಲ್ಲಿ ಸಾಲೆಗಳಿಗೆ ಬಿಡುವು ಕೊಡಬೇಕೆಂದು ಮಂತ್ರಿಗಳನ್ನು ಬಿನ್ನವಿಸುವ ತೀರ್ಮಾನವಾಯಿತು. ಇಲ್ಲಿಯ ಟ್ರೇನಿಂಗ ಕಾಲೇಜನಲ್ಲಿ ಕನ್ನಡಕ್ಕೂ ಸ್ಥಾನ ಕೊಡಬೇಕೆಂದು ಕೇಳಿಕೊಳ್ಳಲಾಯಿತು.

ಶ್ರೀ ರಾಘವೇಂದ್ರಸ್ವಾಮಿಗಳ ಆರಾಧನೆ ಇದೇ ೧೦ ರಿಂದ ೧೬ ರ ವರೆಗೆ ಮಂತ್ರಾಲಯದಲ್ಲಿ ಯಥಾಪ್ರಕಾರ ಜರಗುವದು. ಈ ವರುಷ ರೋಗಾದಿಗಳೇನೂ ಇಲ್ಲದ್ದರಿಂದ ಯಾವದೇ ಬಗೆಯ ನಿರ್ಬಂಧವಿರುವದಿಲ್ಲ. ಆದರೂ ಕಾಲರಾ ಹಬ್ಬಬಾರದೆಂದು ಆರೋಗ್ಯಾಧಿಕಾರಿಗಳು ಜಾತ್ರೆಗೆ ಬರುವವರೆಲ್ಲ ಕಾಲರಾ ಪ್ರತಿಬಂಧಕ ವೈಲೀ ಚುಚ್ಚಿಸಿಕೊಂಡು ಬರಬೇಕೆಂದು ವಿಧಿಸಿದ್ದಾರೆ.

ಬರುವ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಹರಪನಹಳ್ಳಿಯಲ್ಲಿ ಕೂಡಿಸಬೇಕೆಂದು ಗೊತ್ತಾಗಿದ್ದು ಅದಕ್ಕಾಗಿ ಶ್ರೀ ಐ. ವಸುದಾಲಪ್ಪನವರ ಅಧ್ಯಕ್ಷತೆಯಲ್ಲಿ ಸ್ವಾಗತ ಸಮಿತಿ ಏರ್ಪಟ್ಟಿದೆ. ಟಿ. ಎಂ. ಪಂಚಾಕ್ಷರಯ್ಯನವರು ಮತ್ತು ಶಿರಸಪ್ಪಾ ಇಜಾರಿ ಇವರು ಕಾರ್ಯದರ್ಶಿಗಳಾಗಿ ಆರಿಸಲ್ಪಟ್ಟಿರುವರು. ನಿಧಿ ಸಂಗ್ರಹ ಮೊದಲಾದ ಕೆಲಸ ಪ್ರಾರಂಭವಾಗಿದೆ.

### ಕನ್ನಡ ಸಂಸ್ಥಾನ

ಕುಕನೂರ ವಿದ್ಯಾನಂದ ಗುರುಕುಲದ ಹುಟ್ಟುಹಬ್ಬ ಶ್ರಾವಣ ಶುದ್ಧ ೩ ಕ್ಕೆ ೨೪ ವರುಷ ತುಂಬಿದವು. ವಿದ್ಯಾರ್ಥಿಗಳ ಗ್ರಾಮ ಪ್ರದಕ್ಷಿಣೆ ಧ್ವಜವಂದನೆ ನೂಲುವದು ಮುಂತಾದ ಕಾರ್ಯಕ್ರಮವಿದ್ದವು. ಜೈನ ಸಮಾಜದ ಪೂಜ್ಯ ಗುರುಗಳಾದ ಶ್ರೀ ಗಣೇಶಮಲ್ಲ ಮಹಾರಾಜರ ಸನ್ನಿಧಾನದಲ್ಲಿ ಸಂಸ್ಥೆಯ ಅಂದು ಇಂದಿನ ಪರಿಚಯ ಸಮಾವೇಶವಾಯಿತು.

ಮಿರಜಿ ರಾಜೇಸಾಹೇಬರು ತಮ್ಮ ಮೊಮ್ಮಗನ ನಾಮಕರಣ ಸಮಾರಂಭದ ನಿಮಿತ್ತ ೮ ಜನ ಕೈದಿಗಳನ್ನು ಮುಕ್ತಮಾಡಿದ್ದಾರೆ. ಮುರಗುಂಡೆ ಸರಾಫ ದರೋಡೆ ಖಟ್ಲೆಯಲ್ಲಿಯ ಆರೋಪಿಗಳ ಶಿಕ್ಷೆಯನ್ನು ೨ ವರ್ಷ ಕಡಿಮೆ ಮಾಡಿದ್ದಾರೆ.

ಕೊಲ್ಹಾಪುರದಲ್ಲಿ ಶ್ರೀ ಮಾಧವರಾಯರ ಅಧ್ಯಕ್ಷತೆಯಲ್ಲಿ ದಕ್ಷಿಣ ಸಂಸ್ಥಾನಗಳ ಪ್ರಾದೇಶಿಕ ಸಮಿತಿಯ ಸಭೆ ಸೇರಿ ದಕ್ಷಿಣ ಸಂಸ್ಥಾನಗಳು ಮುಂಬಯಿ ಪ್ರಾಂತದಲ್ಲಿ ಸಮಾವೇಶವಾಗಬೇಕೆಂದು ನಿರ್ಧರಿಸಲಾಯಿತು.

ಹೈದ್ರಾಬಾದ ಇತ್ ಅಹದುಲ್ ಮುಸ್ಲಿಮದ ಕೇಂದ್ರ ಸಭೆಯವರು ಸಭೆ ಸೇರಿ ಸರಕಾರದವರು ಕೊಡಮಾಡಿದ ಸುಧಾರಣೆಗಳನ್ನು ನಿರಾಕರಿಸಬೇಕೆಂದು ನಿರ್ಣಯಿಸಲಾಯಿತು. ಸರಕಾರದವರು ಮುಸಲ್ಮಾನರಿಗೆ ಕೊಟ್ಟ ಆಶ್ವಾಸನದಂತೆ ನಡೆಯಲಿಲ್ಲೆಂದೂ ಪ್ರತ್ಯೇಕ ಮತದಾರ ಹಕ್ಕನ್ನು ಕೊಡಲಿಲ್ಲೆಂದೂ ಮುಂತಾಗಿ ಆರೋಪಿಸಲಾಗಿದೆ. ಈ ಸುಧಾರಣೆಗಳು ಮುಸಲ್ಮಾನರ ಹಿತಸಂಬಂಧಗಳಿಗೆ ವಿಘಾತಕವಾಗಿವೆಂದೂ ಸಭೆ ಅಭಿಪ್ರಾಯಪಟ್ಟಿದೆ.

ಸರ್ ಮಿರ್ಜಾ ಇಸ್ಮಾಯಿಲ್‌ರು ೫ನೇ ತಾರೀಕಿಗೆ ಮುಂಜಾನೆ ಹೈದ್ರಾಬಾದ ಸಂಸ್ಥಾನ ಕಾರ್ಯಕಾರೀ ಮಂಡಳದ ಅಧಿಕಾರಸೂತ್ರಗಳನ್ನು ವಹಿಸಿಕೊಂಡರು.

ಸುಧಾರಣೆಗೆ ಧಿಕ್ಕಾರ ಎಂದು ಕೂಗುತ್ತ ಹೊರಟ ಹಿಂದುಮಹಾಸಭೆಯ ೪ ಸತ್ಯಾಗ್ರಹಿಗಳ ತಂಡವನ್ನು ಹೈದ್ರಾಬಾದಿನಲ್ಲಿ ೫ನೇ ತಾರೀಕು ಸೆರೆ ಹಿಡಿಯಲಾಯಿತು.

ರಾಯಚೂರಿನ ಸರಾಫರಾದ ಶ್ರೀ ಮಾಸ್ತಿಪುರ ಹನಮಂತಯ್ಯನವರನ್ನು ಪೋಲಿಸರು ತಮ್ಮ ಪರವಾಗಿ ಸಾಕ್ಷಿದಾರನೆಂದು ಕರೆಸಿಕೊಂಡು ಅವರಿಗೆ ಆ ವಿಷಯದಲ್ಲಿ ಏನೂ ಗೊತ್ತಿಲ್ಲದಿದ್ದರೂ ತಾವು ಹೇಳಿದಂತೆ ಸಾಕ್ಷಿ ಕೊಡಲು ಒತ್ತಾಯ ಮಾಡಿದರೆಂದೂ ಅವರ ಸಾಕ್ಷಿಯಿಂದ ಖಟ್ಲೆ ಕೆಡಲು ಸೀನಿಯರ ಸಬ್ ಇನಸ್ಪೆಕ್ಟರರು ಅವರನ್ನು ಪೋಲಿಸ ಠಾಣೆಗೆ ಕರೆದೊಯ್ದು ಒಳಿತಾಗಿ ಥಳಿಸಿದರೆಂದೂ ಹೇಳಲಾಗುತ್ತದೆ. ಅವರ ಮೈಮೇಲಿ ಹೊಡೆತದ ಕುರುಹುಗಳು ಕಾಣುತಿದ್ದುದರಿಂದ ಮ್ಯಾಜಿಸ್ಟ್ರೇಟರಲ್ಲಿಗೆ ಹೋಗಿ ತಕರಾರು ಕೊಡಲು ಅವರು ಡಾಕ್ಟರರಲ್ಲಿಗೆ ಕಳಿಸಿ ಸರ್ಟಿಫಿಕೇಟು ಪಡೆಯಲು ತಿಳಿಸಿದರು.

### ಉತ್ತರ ಕರ್ನಾಟಕ

ಬಸಪ್ಪಾ ಬಸಪ್ಪಾ ನೂಲಾಶೆಟ್ಟಿ ಸಾ—ಚನ್ನಪಟ್ಟಣ ಇವರು ಶಿರ್ಶಿ ಸೀದಾ ಕ್ಷೇತ್ರದಲ್ಲಿ ವಾಸಿಸದೆ ಇರುವಂಥ ೬ ಜನರ ಹೆಸರನ್ನು ಸುಳ್ಳು ಮಾಹಿತಿ ಕೊಟ್ಟು ತಮ್ಮ ರೇಶನ್ ಕಾರ್ಡಿನಲ್ಲಿ ಸೇರಿಸಿಕೊಂಡಿದ್ದಲ್ಲದೆ ಅವರ ಸೀದಾ ಸಾಮಗ್ರಿ ಪಡೆದುಕೊಂಡ ಬಗ್ಗೆ ಅವರಿಗೆ ೧೦೦ ರೂಪಾಯಿ ದಂಡ ಇಲ್ಲದಿದ್ದರೆ ೧ ತಿಂಗಳ ಸಶ್ರಮ ಶಿಕ್ಷೆ ವಿಧಿಸಲಾಯಿತು. ಬಂಗಾರಿ ಬಾಳಾ ಇವರು ಬೇರೆ ಕಡೆಯವರ ಸೀದಾ ಕಾರ್ಡು ಉಪಯೋಗಿಸಿದ್ದರಿಂದ ೧೫೦ ರೂಪಾಯಿ ದಂಡ ಇಲ್ಲವೆ ೧ ತಿಂಗಳ ಶಿಕ್ಷೆ ವಿಧಿಸಲಾಯಿತು.

ಹಳ್ಯಾಳ ಶಿವಾಜಿ ಹಾಯಸ್ಕೂಲಿನ ಚರ್ಚಾ ಕೂಟದ ಪ್ರಾರಂಭೋತ್ಸವ ಕಾರವಾರ ಜಿಲ್ಲೆಯ ಅ- ಕಲೆಕ್ಟರರಾದ ಶ್ರೀ ಶೀಖ ಇವರಿಂದ ನೆರವೇರಿತು.

## ಮುಂಬಯಿ

ಕೈಮಗ್ಗ ಹಾಗು ಯಾಂತ್ರಿಕ ಮಗ್ಗಗಳ ಮೇಲೆ ತಯಾರಾದ ಎಲ್ಲ ಬಟ್ಟೆಗಳ ಬೆಲೆಯನ್ನು ಶೀಘ್ರದಲ್ಲಿ ನಿರ್ದಿಷ್ಟಪಡಿಸಲಾಗುವದೆಂದು ಜವಳಿ ನಿಯಂತ್ರಕರು ಹೇಳಿರುವರು. ಈ ವರೆಗೆ ೨೫ ಅಥವಾ ಹೆಚ್ಚು ಯಾಂತ್ರಿಕ ಮಗ್ಗಗಳಿರುವ ಕಾರಖಾನೆಗಳ ಬಟ್ಟೆಯ ಬೆಲೆಯಷ್ಟೆ ನಿಯಂತ್ರಿತವಿತ್ತು. ಹೊರಗೆ ಬಟ್ಟೆ ಕಳಿಸಲು ನೇಯುವವರಿಗೆ ನೂಲು ಪೂರೈಸಲಾಗುವದಿಲ್ಲೆಂದೂ ಅವರು ಹೇಳಿದರು.

ಅಂಬಿಕಾನದಿಗೆ ಮಹಾಪೂರ ಬಂದು ಮುಂಬೈ ಹಾಗು ಸುರತ ನಡುವೆ ಉಗಿಬಂಡಿ ಓಡಾಟ ಕಟ್ಟಾಗಿತ್ತು. ನೀರು ೨೧ ಫೂಟು ಏರಿದ್ದು ಇನ್ನೂ ಏರುವದರಲ್ಲಿಯೆ ಇದೆ. ಅಮಲಸಾರ ಹಾಗು ಬಿಲೋರಿಯಾ ರೇಲ್ವೆ ಮಾರ್ಗವು ನೀರಲ್ಲಿ ಮುಳುಗಿ ಹೋಗಿತ್ತು ಈಗ ನೀರು ಇಳಿದಿದೆ.

ಅಹಮದಾಬಾದದಲ್ಲಿ ಕರ್ಫ್ಯೂ ಹುಕುಮಿನ ಅವಧಿಯನ್ನು ಮತ್ತೊಂದು ವಾರ ಬೆಳೆಸಲಾಗಿದೆ ಕೋಟೆಯ ಹದ್ದಿಯಲ್ಲಿ ಸಾಯಂಕಾಲ ೭ ರಿಂದ ಮುಂಜಾನೆ ೫ ರ ವರೆಗೆ ಮತ್ತು ಹೊರಗೆ ರಾತ್ರಿ ೮ ರಿಂದ ಮುಂಜಾನೆ ೫ ರ ವರೆಗೆ ಇದು ಜಾರಿಯಲ್ಲಿರುವದು.

ಸೀಖ ಪಂಗಡವು ಯಾವದೇ ಗಲಭೆಯಲ್ಲಿ ಸಂಬಂಧಿಸದೆ ಇರುವ ವರೆಗೆ ಮತ್ತು ವೈಯಕ್ತಿಕವಾಗಿ ಯೋಗ್ಯ ರೀತಿ ನಡೆದುಕೊಂಡು ಹೋಗುವವರೆಗೆ ಅವರಿಗೆ ಕೃಪಾಣಗಳನ್ನು ಹಿಡಿದುಕೊಂಡು ಹೋಗುವದಕ್ಕೆ ಅಡ್ಡಿ ಮಾಡಬಾರದೆಂದು ಮುಂಬಯಿ ಸರಕಾರದವರು ನಿರ್ಧರಿಸಿದ್ದಾರೆ.

೧೯೪೬-೪೭ ನೇ ವರ್ಷದ ಅರಳೆಯ ಹಜರ ಮತ್ತು ವಾಯದಾ ವ್ಯವಹಾರ ಮಾಡಲು ಮುಂಬೈ ಸರಕಾರದವರು ಅಪ್ಪಣೆ ಕೊಟ್ಟಿದ್ದಾರೆ. ಆದರೆ ಕನಿಷ್ಠ ಮತ್ತು ಪರಮಾವಧಿ ಬೆಲೆಗಳನ್ನು ಈ ವರ್ಷವೂ ೧೯೪೫-೪೬ ರಲ್ಲಿಯಂತೆಯೆ ಸ್ಥಿರಗೊಳಿಸಿರುವರು.

ಅಗಷ್ಟ ೧ ರಿಂದ ಅರಿವೆಯ ಬೆಲೆಗಳು ಏರುವವಿದ್ದವಷ್ಟೆ. ಆದರೆ ಆ ನಿರ್ಣಯವನ್ನು ಸದ್ಯಕ್ಕೆ ಮುಂದೂಡಲಾಗಿದೆಂದೂ ಗಿರಣಿಗಾರರು ಅಗಷ್ಟ ೧ ಮತ್ತು ಅನಂತರ ಮಾರಾಟ ಮಾಡುವ ಅರಿವೆಯ ಮೇಲೆ ೧೯೪೬ ಜೂನ ಜುಲೈಯಲ್ಲಿ ಜಾರಿಯಲ್ಲಿದ್ದ ಬೆಲೆಗಳನ್ನೆ ಮುದ್ರಿಸಬೇಕೆಂದೂ ಹಿಂದುಸ್ಥಾನ ಸರಕಾರದ ಜವಳಿ ಕಮೀಶನರರು ಪ್ರಕಟನೆ ಹೊರಡಿಸಿದ್ದಾರೆ.

ಇದೇ ತಾ. ೧೫ ಕ್ಕೆ ಪುಣೆ ದಲಿತ ವರ್ಗದ ಸತ್ಯಾಗ್ರಹ ದಿನವನ್ನಾಚರಿಸಬೇಕೆಂದು ಅಖಿಲ ಭಾರತ ದಲಿತ ವರ್ಗದ ಮಹಾ ಮಂಡಳದ ಕಾರ್ಯದರ್ಶಿಗಳು ಪ್ರಕಟನೆ ಮೂಲಕ ಸಾರಿದ್ದಾರೆ.

ಡಾ. ಎಂ. ಆರ್. ಜಯಕರರಿಂದ ಘಟನಾ ಸಮಿತಿಯ ನಾಮಿನೇಶನ್ ಪತ್ರ ಸಕಾಲಕ್ಕೆ ಬಾರದ್ದರಿಂದ ಶ್ರೀ ಶಾಂತಿಲಾಲ ಶಹಾ ಇವರು ನಾಮಪತ್ರ ಕೊಟ್ಟು ಆರಿಸಿ ಬಂದಿರುವರಷ್ಟೆ. ಈಗ ಡಾ. ಜಯಕರರು ಇಲ್ಲಿಗೆ ಬಂದದ್ದರಿಂದ ಶ್ರೀ ಶಾಂತಿಲಾಲ ಶಹಾರವರು ಘಟನಾ ಸಮಿತಿಗೆ ರಾಜೀನಾಮೆ ಕೊಟ್ಟು ತಮ್ಮ ಸ್ಥಳದಲ್ಲಿ ಡಾ. ಜಯಕರರನ್ನು ಆರಿಸಿ ತರುವರೆಂದು ಗೊತ್ತಾಗುತ್ತದೆ. ಈ ಪ್ರಕಾರ ಮೊದಲೆ ಏರ್ಪಡಿಸಲಾಗಿದೆ.

ಕಳೆದ ವಾರ ಸಶಸ್ತ್ರ ದರೋಡೆಗಾರರು ಉರುಳಿ ಕಾಂಚನದಲ್ಲಿಯೂ ಜೇಜೂರಿ ಬಳಿಯಲ್ಲಿಯೂ ಖೇಡ ತಾಲೂಕಿನಲ್ಲಿಯೂ ದರೋಡೆ ಮಾಡಿ ೧೫-೨೦ ಸಾವಿರ ರೂಪಾಯಿಗಳನ್ನು ಲೂಟಿ ಮಾಡಿಕೊಂಡು ಹೋಗಿರುವ ವರದಿ ಬಂದಿದೆ.

ಮುಂಬಯಿ ಸರಕಾರದವರು ಆನರರಿ ಮ್ಯಾಜಿಸ್ಟ್ರೇಟರ ಶಾಖೆಯಲ್ಲಿ ಸುಧಾರಣೆ ಮಾಡಬೇಕೆಂದು ಬಗೆದಿದ್ದಾರೆ. ಕಾರ್ಯ ಹೆಚ್ಚು ಚೆನ್ನಾಗಿ ನಡೆಯಬೇಕೆಂದು ಸಧ್ಯದ ಮ್ಯಾಜಿಸ್ಟ್ರೇಟರನ್ನು ಬದಲು ಮಾಡಬೇಕೆಂದೂ ಯೋಚಿಸಲಾಗಿದೆಂದು ತಿಳಿಯುತ್ತದೆ.

ಒಬ್ಬ ಪ್ರವಾಸಿಕನು ತನ್ನ ಸಂಗಡ ಕೇವಲ ೧೪ ಪೌಂಡು ಬಟ್ಟೆಯನ್ನು ಒಯ್ಯಬಹುದೆಂದು ಜವಳಿ ಕಮೀಶನರರು ವಿಧಿಸಿದ್ದಾರೆ. ಈ ಮೊದಲು ೨೦ ೦ ಡ ೨ ಬಟ್ಟೆ ಒಯ್ಯಲು ಅವಕಾಶವಿದ್ದಿತು.

# ಹಿಂದುಸ್ಥಾನ

## ಮದ್ರಾಸ

ಎಸ್. ಅಯ. ರೇಲ್ವೆ ಯೂನಿಯನ್ನಿನವರು ೧ ನೇ ತಾರೀಕಿಗೆ ೧೫ ದಿನಗಳ ಸಂಪಿನ ನೋಟೀಸು ಕೊಟ್ಟಿದ್ದು ಅದರಲ್ಲಿ ಅವರುತಮ್ಮ ಬೇಡಿಕೆಗಳನ್ನು ಮುಂದಿಸಿದ್ದಾರೆ. ಈ ಬೇಡಿಕೆಗಳು ಸಂಬಳ ಸಮಿತಿಗೆ ಹಾಗು ಮಧ್ಯಸ್ಥನಿಗೆ ಈಗ ಒಪ್ಪಿಸಲಾದ ವಿಷಯಗಳನ್ನು ಬಿಟ್ಟು ಇರುವವು.

ಶ್ರೀ ಎಂ. ತಿರುಮಲರಾವ ಇವರು ನ್ಯೂಟಾಯಿಮ್ಸ ಎಂಬ ಇಂಗ್ಲಿಶಾ ಹೊಸ ದೈನಿಕ ಪತ್ರವನ್ನು ಮದ್ರಾಸಿನಿಂದ ಹೊರಡಿಸಲಿರುವರು.

ಇಂಗ್ಲಂಡಿನಲ್ಲಿ ಕ್ರಿಕೆಟ ಲೀಗ ಕ್ಲಬ್ಬಿನವರು ಹಿಂದುಸ್ಥಾನದ ಕ್ರಿಕೆಟಪಟು ಎಲ್. ಅಮರನಾಥರನ್ನು ಕೆಲಸಕ್ಕೆ ಕರೆದಿದ್ದು ಹಿಂದುಸ್ಥಾನ ಕ್ರಿಕೆಟ ಸಂಘದವರು ಹೋಗಲು ಅವರಿಗೆ ಅಪ್ಪಣೆ ಕೊಟ್ಟಿರುವರು. ಆದರೆ ಹಿಂದುಸ್ಥಾನಕ್ಕೆ ಅವಶ್ಯವೆನಿಸಿದಾಗ ಬರತಕ್ಕದ್ದೆಂದು ಕರಾರ ಹಾಕಿರುವರು.

## ಹೊಸದಿಲ್ಲಿ

ಬಂಡವಲು ತೊಡಗಿಸಲು ಪೇಟೆಯಲ್ಲಿ ಬೇಡಿಕೆಯಿದ್ದುದು ಕಂಡುಬಂದದ್ದರಿಂದ ಹಿಂದುಸ್ಥಾನ ಸರಕಾರದವರು ೧೯೭೦ನೇ ಇಸ್ವಿಯಲ್ಲಿ ಮುಟ್ಟುವ ಕರಾರಿನಿಂದ ೧೦೦ಕ್ಕೆ ೨॥ ಬಡ್ಡೀ ದರದ ೨೦ಕೋಟಿ ರೂಪಾಯಿ ಸಾಲ ತೆಗೆಯಲು ನಿರ್ಧರಿಸಿದ್ದಾರೆ. ರಿಜರ್ವ ಬ್ಯಾಂಕಿನಲ್ಲಿ ಸೆಕ್ಯುರಿಟಿಗಳು ಸಿಕ್ಕುತ್ತವೆ.

ಯುದ್ಧ ಮುಗಿದು ಒಂದು ವರ್ಷವಾಗಿದ್ದರೂ ಹಿಂದೀ ಸೈನ್ಯದ ೧೮ ಸಾವಿರ ಸೈನಿಕರ ಪತ್ತೆ ಇಲ್ಲವಾದ್ದರಿಂದ ಎರಡನೇ ಮಹಾಯುದ್ಧದ ರಣಭೂಮಿಗಳಲ್ಲಿ ಈಗ ಅವರ ಶೋಧ ನಡೆದಿದೆ.

ಕಾಗದದ ಪರಿಸ್ಥಿತಿ ಸಾಕಷ್ಟು ಸುಧಾರಿಸದಿದ್ದುದರಿಂದ ಹೊಸ ವೃತ್ತಪತ್ರಗಳ ಅವಶ್ಯಕತೆಯನ್ನು ಮನಗಂಡ ಹೊರತು ಅವುಗಳಿಗೆ ಅಪ್ಪಣೆ ಕೊಡಲಾಗುವದಿಲ್ಲೆಂದೂ ಕೊಟ್ಟರೂ ಕಡಮೆ ಕೋಟಾ ಕೊಡಲಾಗುವದೆಂದೂ ತಿಳಿಯುತ್ತದೆ. ೧೯೪೬ ರಲ್ಲಿ ೩೨೫೦೦ ಟನ್ ಕಾಗದ ಹಿಂದುಸ್ಥಾನಕ್ಕೆ ಬರಲಿದ್ದು ಇದು ಯುದ್ಧಪೂರ್ವದ ಕಾಗದ ಆಯಾತಕ್ಕೆ ೮೦ ಸಾವಿರ ಟನ್ನಿನಷ್ಟು ಮಾತ್ರ ಕಡಮೆಯಿದೆ ಕೋಟಾ ಇದ್ದ ಮೂಲಕ ಇಷ್ಟು ಕಾಗದ ಸಾಕಾಗಬಹುದು. ಮುಂದಿನ ವರ್ಷ ಇದಕ್ಕೂ ಹೆಚ್ಚು ಕಾಗದ ಸಿಕ್ಕಬಹುದು.

ಅಂಚೆ ಖಾತೆ ಹಾಗು ಅದರ ನಾನ್‌ಗೆಜೆಟೆಡ್ ನೋಕರರು ಇವರಲ್ಲಿ ಉದ್ಭವಿಸಿರುವ ತಂಟೆಯ ಬಗ್ಗೆ ಮಧ್ಯಸ್ಥರ ನಿರ್ಣಯ ಅಗಷ್ಟ ೫ ರಿಂದ ೬ ತಿಂಗಳ ವರೆಗೆ ಬಳಕೆಯಲ್ಲಿರುವದೆಂದು ಸರಕಾರದ ಪ್ರಕಟನೆ.

ಸರಕಾರದವರು ಅಗಷ್ಟ ೧ ರಿಂದ ಖಾಸಗಿ ಕಾರುಗಳಿಗೆ ಹಾಗೂ ಮೋಟರ ಸಾಯಕಲ್ಲುಗಳಿಗೆ ಈಗಿನ ಇಮ್ಮಡಿ ಪೆಟ್ರೋಲ ಕೊಡಲು ನಿರ್ಧರಿಸಿದ್ದಾರೆ. ಉಳಿದವುಗಳಿಗೆ ಸುಮಾರು ೧೦೦ ಕ್ಕೆ ೨೫ ರಷ್ಟು ಪೆಟ್ರೋಲ ಕೊಡಲಾಗುವದು.

ಕೇಂದ್ರ ಸರಕಾರದ ಸುದ್ದಿ ಆಕಾಶವಾಣಿ ಖಾತೆಯವರು ಪರದೇಶಗಳಲ್ಲಿ ಹಿಂದುಸ್ಥಾನದ ಬಗ್ಗೆ ಪ್ರಚಾರ ಮಾಡಲು ೧೮ ಲಕ್ಷ ರೂಪಾಯಿಗಳನ್ನು ಮಂಜೂರ ಮಾಡಲು ಹಣಕಾಸಿನ ಸ್ಥಾಯೀ ಸಮಿತಿಯವರು ನಿರಾಕರಿಸಿರುವರೆಂದು ತಿಳಿಯುತ್ತದೆ ಭಾರತ ಆಕಾಶವಾಣಿಯ ಮೂಲಕ ವಿದೇಶದಲ್ಲಿ ಪ್ರಚಾರ ಕೈಕೊಳ್ಳಲು ೨೮ ಲಕ್ಷ ರೂಪಾಯಿಗಳನ್ನು ಈ ಸಮಿತಿ ಮಂಜೂರ ಮಾಡಿಲ್ಲ.

## ಪಂಜಾಬ

ಪಂಜಾಬ ಸರಕಾರದವರು ಮುಖ್ಯ ನಗರಗಳಲ್ಲಿ ಜಾರಿಯಲ್ಲಿರುವ ಸಭೆ ಮೆರವಣಿಗೆಗಳ ಮೇಲಿನ ನಿರ್ಬಂಧಕಾಜ್ಞೆಯನ್ನು ಹಿಂತೆಗೆದು ಕೊಂಡಿದ್ದಾರೆ. ಸಾರ್ವಜನಿಕರ ಒತ್ತಾಯದಿಂದ ನಿರ್ಬಂಧವನ್ನು ಹಿಂತೆಗೆದುಕೊಳ್ಳಲಾಗಿದೆ. ಜಾತಿಯ ಗಲಭೆಗೆ ಪ್ರೋತ್ಸಾಹಕೊಡುವ ಪರಿಸ್ಥಿತಿಯನ್ನುಂಟು ಮಾಡಬೇಡಿರೆಂದು ಸಾರ್ವಜನಿಕ ಸಭೆಗಳನ್ನೇರ್ಪಡಿಸುವ ಸಂಘ ಸಂಸ್ಥೆಗಳನ್ನು ಬೇಡಿಕೊಳ್ಳಲಾಗಿದೆ. ಇದಕ್ಕೆ ವಿರುದ್ಧವಾಗಿ ನಡೆದರೆ ಮತ್ತೆ ೧೪೪ ಕಲಮನ್ನು ಜಾರಿಯಲ್ಲಿ ತರಲಾಗುವದು.

## ಬಂಗಾಲ—ಆಸಾಮ

ಜುಲೈ ತಿಂಗಳಲ್ಲಿ ೮೪೦೦೦ ಟನ್ ಆಹಾರ ಧಾನ್ಯಗಳು ಆಸ್ಟ್ರೇಲಿಯಾ ಬ್ರಹ್ಮದೇಶಗಳಿಂದ ಕಲಕತ್ತೆಗೆ ಬಂದವು.

ಸುಪ್ರಸಿದ್ಧ ಭೋವಾಲ ಸನ್ಯಾಸಿಯ ಖಟ್ಲೆಯ ಕುಮಾರ ರಾಮೇಂದ್ರ ನಾರಾಯಣ ಭೋವಾಲ ಇವರು ೫ನೇ ತಾರೀಕಿನ ದಿವಸ ಕಲಕತ್ತೆಯಲ್ಲಿ ನಿಧನಹೊಂದಿದರು. ಈ ವಾರವೆ ಪ್ರಿ. ವ್ಹಿ. ಕೌನ್ಸಿಲ್ಲಿನಲ್ಲಿ ಅವರಂತೆ ಖಟ್ಲೆ ನಿರ್ಣಯವಾಗಿ ಆಸ್ತಿಯೆಲ್ಲ ಅವರಿಗೆ ಬಂದಿತ್ತು. ಅವರ ಹೆಂಡತಿ ವಿಭಾವತಿದೇವಿಯೆ ಇವನು ತನ್ನ ಗಂಡನಲ್ಲೆಂದು ವಾದಿಸುತಿದ್ದಳು.

ಪೂರ್ವ ಆಸಾಮದಲ್ಲಿರುವ ನಾಗಬೆಟ್ಟ ಪ್ರದೇಶವೂ ಹಿಂದುಸ್ಥಾನದಲ್ಲಿ ಸಮಾವೇಶವಾಗಬೇಕೆಂದು ಪಂಡಿತ ಜವಾಹರಲಾಲರು ನಾಗಬೆಟ್ಟಗಳ ಅಧ್ಯಕ್ಷರಿಗೆ ಪತ್ರ ಬರೆದು ತಮ್ಮ ಅಭಿಪ್ರಾಯ ತಿಳಿಸಿದ್ದಾರೆ. ಇಡೀ ನಾಗ ಪ್ರದೇಶವನ್ನು ಒಟ್ಟುಗೂಡಿಸಿ ಲೋಕನಿಯುಕ್ತ ರಾಷ್ಟ್ರೀಯ ಕೌನ್ಸಿಲ್ಲಿನ ನಿಯಂತ್ರಣದಲ್ಲಿ ಕೊಡಬೇಕೆಂದೂ ಅಸಾಮ ಶಾಸನ ಸಭೆಯಲ್ಲಿ ಅವರಿಗೆ ಪ್ರಾತಿನಿಧ್ಯ ಕೊಡಬೇಕೆಂದೂ ಅಭಿಪ್ರಾಯಪಟ್ಟಿದ್ದಾರೆ.

ಕಲಕತ್ತಾ ಇಂಪೀರಿಯಲ್ ಬ್ಯಾಂಕಿನ ಕೆಲಸಗಾರರು ಸಂಪು ಹೂಡಿರುವರಷ್ಟೆ. ಈ ಸಂಬಂಧದಲ್ಲಿ ಬ್ಯಾಂಕಿನ ಕೋಶಾಧ್ಯಕ್ಷ ಮತ್ತು ಕಾರ್ಯದರ್ಶಿಗಳು ಪ್ರಕಟನೆ ಮೂಲಕ ಸಾರ್ವಜನಿಕರಿಗಾದ ತೊಂದರೆ ಬಗ್ಗೆ ಕ್ಷಮೆ ಕೋರಿದ್ದಾರೆ. ಕೆಲಸಗಾರರ ಬೇಡಿಕೆಗಳನ್ನು ಮಧ್ಯಸ್ಥರಿಗೆ ಒಪ್ಪಿಸುವದಾಗಿ ಸಂಪು ಪ್ರಾರಂಭವಾಗುವ ಮೊದಲೆ ತಿಳಿಸಲಾಗಿತ್ತೆಂದೂ ಅವರು ಹೇಳಿರುವರು. ೧೦೦೦ ಜನರು ಈ ಸಂಪಿನಲ್ಲಿ ಸೇರಿರುವರು.

## ಸಂಯುಕ್ತಪ್ರಾಂತ

ಯುಕ್ತಪ್ರಾಂತ ಕಾಂಗ್ರೆಸ ಕಮೀಟಿಯ ಅಧ್ಯಕ್ಷರೂ ಕಾಂಗ್ರೆಸ ಸೋಶಾಲಿಷ್ಟ ಪಕ್ಷದ ಧುರೀಣರೂ ಆಗಿರುವ ಸೇಟ ದಾಮೋದರ ಸ್ವರೂಪರು ಘಟನಾ ಸಮಿತಿಯ ಸದಸ್ಯತ್ವಕ್ಕೆ ರಾಜೀನಾಮೆ ಕೊಟ್ಟು ಅದನ್ನು ಪ್ರಾಂತೀಯ ಶಾಸನ ಸಭೆಯ ಕಾಂಗ್ರೆಸ ಪಕ್ಷದ ಧುರೀಣರಿಗೆ ಒಪ್ಪಿಸಿರುವರೆಂದು ತಿಳಿಯುತ್ತದೆ. ಈ ರಾಜೀನಾಮೆ ಪತ್ರ ಸ್ವೀಕರಿಸಲು ತಮಗೆ ಅಧಿಕಾರವಿಲ್ಲೆಂದು ಪಂ. ಗೋವಿಂದ ವಲ್ಲಭಪಂತರು ಅವರಿಗೆ ತಿಳಿಸಿ ರಾಜೀನಾಮೆ ಹಿಂತೆಗೆದುಕೊಳ್ಳಬೇಕೆಂದೂ ಕೇಳಿಕೊಂಡಿದ್ದಾರೆ.

ಗಂಗಾ ನದಿಗೆ ಮಹಾಪೂರ ಬಂದು ೨ ದಿನಗಳಲ್ಲಿ ೨೪೮ ಫೂಟು ೧೧ ಇಂಚು ನೀರು ಏರಿದ್ದರಿಂದ ಬನಾರಸದಲ್ಲಿ ಇಂದ್ರಡಮ್ಮ ಗುಡಿಯಲ್ಲಿ ನೀರು ಹೊಕ್ಕಿದ್ದವು. ಪ್ರತಿ ವರ್ಷಕ್ಕಿಂತ ೪೫ ಫೂಟು ನೀರು ಹೆಚ್ಚಿಗೇರಿದ್ದು ಉಚ್ಚಾಂಕ ಮುಟ್ಟಲು ಇನ್ನು ೫ ಫೂಟು ಉಳಿದಿದೆ. ಗಂಗಾ ನದಿ ದಂಡೆಯಲ್ಲಿದ್ದ ಕೆಲ ಊರುಗಳು ನೀರಲ್ಲಿ ನಿಂತಿವೆ.

ಬನಾರಸದಿಂದ ಸುಮಾರು ೧೨ ಮೈಲು ದೂರದಲ್ಲಿರುವ ಚೋಳಾಪುರ ಪೋಲಿಸ ಠಾಣೆಯ ಹತ್ತರ ಗೋಳೀಬಾರಿನಲ್ಲಿ ಮರಣ ಹೊಂದಿದ ಐವರ ಸ್ಮಾರಕ ಕಟ್ಟಡದ ಅಡಿಗಲ್ಲನ್ನಿಡುವ ಸಮಾರಂಭ ಡಾ. ರಾಮಮನೋಹರ ಲೋಹಿಯಾ ಇವರ ಹಸ್ತದಿಂದ ೨ ನೇ ತಾರೀಕು ನೆರವೇರಿತು. ಈ ಹುತಾತ್ಮರ ಸ್ಮರಣಾರ್ಥ ಒಂದು ಹಾಯಸ್ಕೂಲನ್ನು ಅವರು ನಡೆಸಬೇಕೆಂದಿದ್ದಾರೆ.

ಸಂಯುಕ್ತಪ್ರಾಂತದ ಸ್ಥಾನಿಕ ಸ್ವರಾಜ್ಯ ಮಂತ್ರಿಗಳಾದ ವಿಜಯಲಕ್ಷ್ಮೀ ಪಂಡಿತರು ೭೫ ಲಕ್ಷ ರೂಪಾಯಿಗಳ ಬೇಡಿಕೆಯನ್ನು ಆರೋಗ್ಯ ಖಾತೆಗಾಗಿ ಬೇಡುವಾಗ ಐದೈದು ವರ್ಷಗಳ ಎರಡು ಯೋಜನೆಗಳನ್ನು ಮಂಡಿಸಿದರು. ಸಾರ್ವಜನಿಕ ಆರೋಗ್ಯ ರಕ್ಷಣೆಯ ತಮ್ಮ ಯೋಜನೆಯನ್ನು ಅವರು ವಿವರಿಸಿದರು.

## ಬಿಹಾರ

ಕಾಂಗ್ರೆಸ್ಸಿನ ಪುನರ್ಘಟನೆ ವಿಧಾಯಕ ಕಾರ್ಯಕ್ರಮ ಮತ್ತು ಆಹಾರ ಪೂರೈಕೆ ಮೊದಲಾದ ವಿಷಯಗಳ ಬಗ್ಗೆ ಹೊಸದಾಗಿ ಸಂಘಟಿತವಾದ ಬಿಹಾರ ಪ್ರಾಂತಿಕ ಕಾಂಗ್ರೆಸ ಸಮಿತಿಯ ಸಭೆಯಲ್ಲಿ ಚರ್ಚೆಯಾಯಿತು. ವಿಧಾಯಕ ಕಾರ್ಯದ ಬಗ್ಗೆ ಉಪಸಮಿತಿಯೊಂದು . ನಿಯಮಿಸಲ್ಪಟ್ಟಿತು. ಬಿಹಾರ ವಿದ್ಯಾಪೀಠದಲ್ಲಿ ಶಿಕ್ಷಣ ಪಡೆಯಲ್ ೧೬ ವಿದ್ಯಾರ್ಥಿಗಳಿಗೆ ಶಿಷ್ಯವೃತ್ತಿ ಕೊಡಬೇಕೆಂದೂ ಗೊತ್ತಾಯಿತು.

ಮುಸ್ಲಿಂ ಲೀಗಿನವರು ಹೋರಾಟದ ನಿರ್ಣಯವನ್ನು ಸ್ವೀಕರಿಸಿ ಹಿಂದುಸ್ಥಾನದ ಸ್ವಾತಂತ್ರ್ಯದ ಮಾರ್ಗದಲ್ಲಿ ವಿಷವನ್ನು ಉಪಸ್ಥಿತ ಮಾಡಲು ನಿಶ್ಚಯಿಸಿದ್ದನ್ನು ಪ್ರತಿಭಟಿಸುವ ಉಪಾಯಗಳ ವಿಚಾರ ಮಾಡಲು ಬಿಹಾರದಲ್ಲಿಯ ರಾಷ್ಟ್ರೀಯ ಮುಸಲ್ಮಾನರು ಸಪ್ಟಂಬರ ೧ಕ್ಕೆ ಸಭೆ ಸೇರಲಿದ್ದಾರೆ.

## ಮಧ್ಯಪ್ರಾಂತ

ನಾಗಪುರ ವಿಶ್ವವಿದ್ಯಾಲಯದಲ್ಲಿ ೧೯೪೭ ಜುಲೈ ತಿಂಗಳಿಂದ ಇಂಗ್ಲೀಷಿನ ಬದಲು ಹಿಂದೀ ಮರಾಠಿ ಮತ್ತು ಉರ್ದುಗಳನ್ನು ಒತ್ತಾಯದ ಬೋಧಭಾಷೆಯನ್ನಾಗಿ ಮಾಡಲಾಗುವದೆಂದು ವಾಯಿಸ್ ಚಾನ್ಸಲರರು ತಿಳಿಸಿದ್ದಾರೆ. ನಾಗಪುರದ ಕಾಲೇಜುಗಳಲ್ಲಿ ಮತ್ತು ವರ್ಧಾದ ವಾಣಿಜ್ಯ ಕಾಲೇಜುಗಳಲ್ಲಿ ಕಳೆದ ವರ್ಷ ಭಾರತೀಯ ಭಾಷೆಗಳನ್ನು ಬೋಧಭಾಷೆ ಮಾಡಲಾಗಿತ್ತು ಅದರ ಪರಿಣಾಮ ತೃಪ್ತಿಕರವಾಗಿದೆಂದೂ ಅವರು ಹೇಳಿದರು.

ಮಧ್ಯಪ್ರಾಂತದಲ್ಲಿ ಸುಮಾರು ೩೦ ಲಕ್ಷ ಮೂಲ ನಿವಾಸಿಗಳಿರುವರು. ಇವರ ಉದ್ಧಾರಕ್ಕೆ ಅಲ್ಲಿ ಪ್ರಾಥಮಿಕ ಶಾಲೆಗಳನ್ನು ಪ್ರಾರಂಭಿಸಬೇಕು. ಪುಕ್ಕಟೆ ಛಾತ್ರಾಲಯಗಳನ್ನು ಪ್ರಾರಂಭಿಸಬೇಕು. ಶಿಷ್ಯವೃತ್ತಿ ಕೊಡಬೇಕು, ಔಷಧ ಸಹಾಯ ಪೂರಯಿಸಬೇಕೆಂದು ಮುಂತಾಗಿ ಠಕ್ಕರಬಾಪಾರವರು ಮಧ್ಯಪ್ರಾಂತ ಸರಕಾರಕ್ಕೆ ಸಲಹೆ ಕೊಟ್ಟಿರುವರು.

ಜಿ. ಅಯ. ಪಿ ರೇಲ್ವೆಯ ಜಬಲಪುರ ಕಟ್ಲೆ ಭಾಗದ ಸಿಹೋರಾ ಸ್ಟೇಶನ್ನಿನ ಅ. ಸ್ಟೇಶನ ಮಾಸ್ತರರು ಹಾಗು ರಿಲೀವಿಂಗ ಅ. ಸ್ಟೇಶನ ಮಾಸ್ತರರು ತಿಕೀಟು ಕೊಡುವಲ್ಲಿ ಲಂಚ ತೆಗೆದುಕೊಂಡದ್ದು ಸಿದ್ಧವಾದ್ದರಿಂದ ಮ್ಯಾಜಿಸ್ಟ್ರೇಟರು ಅವರಿಗೆ ೬ ತಿಂಗಳ ಕಠಿಣ ಶಿಕ್ಷೆ ಹಾಗು ೫೦೦ರೂ. ದಂಡ ವಿಧಿಸಿದರು.

ನಾಗಪುರದಲ್ಲಿಯ ಆರು ಶಾಲೆಗಳಲ್ಲಿ ಬಡ ಮಕ್ಕಳಿಗೆ ಮಧ್ಯಾಹ್ನದ ಊಟವನ್ನು ಕೊಡಬೇಕೆಂದೂ ಇದರಿಂದ ಬಡವರಿಗೆ ಪೌಷ್ಟಿಕ ಆಹಾರ ಸಿಕ್ಕಂತಾಗುವದೆಂದೂ ಆರೋಗ್ಯ ಖಾತೆಯವರು ವಿಚಾರ ನಡೆಸಿದ್ದಾರೆ. ೬ ತಿಂಗಳ ವರೆಗೆ ಇದರ ಪ್ರಯೋಗ ನಡೆಯುವದು.

## ಸಿಂಧ

ಸಿಂಧ ಪ್ರಾಂತದ ಸರಕಾರಿ ನೋಕರರಿಗೆ ಇತ್ತೀಚೆಗೆ ಸಂಬಳ ಬಡತಿ ಕೊಡಲಾಗಿತ್ತಷ್ಟೆ. ಆದರೆ ವಿರೋಧಿ ಪಕ್ಷದ ಧುರೀಣರಾದ ಶ್ರೀ ಜಿ. ಎಂ. ಸಯ್ಯದರು ವಿರೋಧ ಮಾಡಿದ್ದರಿಂದ ಶಾಸನ ಸಭೆ ಜರಗುವವರೆಗೆ ಅದನ್ನು ತಡೆಹಿಡಿಯಲಾಗಿದೆಂದು ಪ್ರಾಂತಿಕ ಸರಕಾರದವರು ಪ್ರಕಟನೆ ಹೊರಡಿಸಿದ್ದಾರೆ.

ಮುಸ್ಲಿಂ ಲೀಗಿನ ಭಾವೀ ಹೋರಾಟದ ಕಾರ್ಯಕ್ರಮದಲ್ಲಿ ಕರ ನಿರಾಕರಣ ವಿಶೇಷತಃ ಕೇಂದ್ರ ಸರಕಾರದ ಕರ ನಿರಾಕರಣ ಘಟನಾ ಸಮಿತಿಗೆ ಬಹಿಷ್ಕಾರ ಮೊದಲಾದವುಗಳು ಅಡಕವಾಗಿರುವವೆಂದು ಲೀಗ ಕೌನ್ಸಿಲಿನ ಸದಸ್ಯರೊಬ್ಬರು ಹೇಳಿದರು. ಘಟನಾಸಮಿತಿಗೆ ರಾಜೀನಾಮೆ ಕೊಡದೆ ಅವರು ಅದಕ್ಕೆ ಹಾಜರ ಉಳಿಯುವದಿಲ್ಲೆಂದು ಅವರು ಹೇಳಿದರು. ಇದರಿಂದ ಎರಡನೆಯವರಿಗೆ ಅಲ್ಲಿ ಹೋಗಲು ಅವಕಾಶವುಳಿಯುವದಿಲ್ಲ. ಸಿಂಧ ಪಂಜಾಬ ಮಂತ್ರಿ ಮಂಡಲಗಳು ರಾಜೀನಾಮೆಯನ್ನೂ ಕೊಡುವದಿಲ್ಲ ಎಂದು ಅವರು ಹೇಳಿದರು.

ಸಿಂಧ ಶಾಸನ ಸಭೆ ಸಪ್ಟೆಂಬರ ೫ಕ್ಕೆ ಕೂಡುವದಿದ್ದು ಮೊದಲು ಅವಿಶ್ವಾಸದ ಗೊತ್ತುವಳಿಯೆ ಚರ್ಚೆಗೆ ಬರುವದೆಂದು ಮುಂತಾಗಿ ವಿಶೇಷ ಗ್ಯಾಝಿಟ ಹೊರಟಿದೆ.

ಮುಂಬಯಿಯಿಂದ ಕರಾಚಿಗೆ ವ್ಹಿಸ್ಕಿ, ಸಿಗರೇಟ ಮೊದಲಾದ ಸಾಮಾನಗಳನ್ನು ಕಳವು ಮಾಡಿಕೊಂಡು ಒಯ್ದರೆಂಬ ಅಪಾದನೆ ಮೇಲೆ ಒಂದು ಹಡಗದ ೫ ಜನ ಯುರೋಪಿಯನ್‌ರು ಕಳೆದ ರವಿವಾರ ಸೆರೆಹಿಡಿಯಲ್ಪಟ್ಟರು. ಅವರೀಗ ಜಾಮೀನ ಮೇಲೆ ಬಿಡಲ್ಪಟ್ಟಿರುವರು.





## ಬೆಂಗಳೂರು-ಮೈಸೂರು

ಮೈಸೂರ ಸಂಸ್ಥಾನದ ವಿದ್ಯಾರ್ಥಿ ಕಾಂಗ್ರೆಸ್ ಕಾರ್ಯಕರ್ತರ ಸಮ್ಮೇಲನ ತಾ ೪ ಕ್ಕೆ ಬೆಂಗಳೂರಿನಲ್ಲಿ ಶ್ರೀ ಟಿ ಎಲ್ ವಿ ಶೆಟ್ಟಿಯವರ ಅಧ್ಯಕ್ಷತೆಯಲ್ಲಿ ಜರುಗಿತು. ವಿದ್ಯಾರ್ಥಿಗಳ ಕಾರ್ಯಕ್ರಮವನ್ನು ಚರ್ಚಿಸಲಾಯಿತು. ವಿಶ್ವಕರ್ನಾಟಕ ದಿನಪತ್ರಿಕೆಯ ಮೇಲೆ ಸರಕಾರ ಕೈಕೊಂಡ ಕ್ರಮದ ಟೀಕೆ, ಗೋವೆಯಲ್ಲಿ ಜನರ ಮೇಲೆ ನಡೆದಿರುವ ದಬ್ಬಾಳಿಕೆಗಳ ನಿಷೇಧ, ೨೨ ಆಡಳಿತಗಳಲ್ಲಿ ಹಂಚಿ ಹೋಗಿರುವ ಕರ್ನಾಟಕದ ಏಕೀಕರಣದ ಬೇಡಿಕೆ ಹಾಗು ಮೈಸೂರ ಸಂಸ್ಥಾನದಲ್ಲಿ ಹೊಣೆಗಾರ ಸರಕಾರದ ಪ್ರತಿಪಾದನೆಯನ್ನು ಮಾಡುವ ಗೊತ್ತುವಳಿಗಳಾದವು.

ಕಲಾಸಿಪಾಳ್ಯದ ಬಸ್ ನಿಲ್ದಾಣದ ಬಳಿ ಇಬ್ಬರು ಮಿಲಿಟರಿಯವರು ಮೋಲಾರ ಬೈಸಿಕಲ್ ಹತ್ತಿಬರುತ್ತಿದ್ದಾಗ ಮಹಮದ ಕಾಶಿ ಎಂಬವನ ಮೇಲೆ ಹಾಯಿಸಿದ್ದರಿಂದ ಅವನು ಅಸ್ಪತ್ರೆಯಲ್ಲಿ ತೀರಿಕೊಂಡನು. ಈ ಮಿಲಿಟರಿಯವರನ್ನು ಹಿಡಿದು ಪೋಲೀಸರು ಸೈನ್ಯಾಧಿಕಾರಿಗಳಿಗೆ ಒಪ್ಪಿಸಿದ್ದಾರೆ.

ಬೆಂಗಳೂರ ನಗರಸಭೆಯ ಅಧಿಕಾರ ಅವಧಿಯನ್ನು ೧೯೪೭ ಜನವರಿ ೧ರಿಂದ ಹಿಡಿದು ಒಂದು ವರ್ಷ ಕಾಲ ಬೆಳೆಸಬೇಕೆಂಬ ನಿರ್ಣಯವನ್ನು ನಗರಸಭೆ ಬಹುಮತದಿಂದ ಅಂಗೀಕರಿಸಿದೆ.

ಮೈಸೂರ ಮುಸ್ಲಿಂ ಲೀಗಿನ ಅಧ್ಯಕ್ಷರಾದ ಮಹಮ್ಮದ ಶರೀಫರು ತಮ್ಮ ಖಾನಸಾಹೇಬ ಬಿರುದನ್ನು ಅ ಭಾ ಮುಸ್ಲಿಂ ಲೀಗ ನಿರ್ಧಾರವನ್ನು ಅನುಸರಿಸಿ ತ್ಯಜಿಸಿದರು. ಖಾನಬಹಾದೂರ ಅಬ್ಬಾಸಖಾನರು ಬಿರುದು ತ್ಯಜಿಸುವರೋ ಇಲ್ಲವೋ ಇನ್ನೂ ನಿರ್ಧಾರವಾಗಿಲ್ಲ.

ಮೈಸೂರ ನಗರ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿ ಶ್ರೀ ಎಸ್ ಚನ್ನಯ್ಯನವರು ಆರಿಸಲ್ಪಟ್ಟಿದ್ದಾರೆ.

ಇನ್ನೂ ಅಧಿಕಾರಾವಧಿ ೧೮ ತಿಂಗಳು ಇರುವಾಗಲೆ ನಿವೃತ್ತರಾಗಿರುವ ದಿವಾಣ ಮಾಧವರಾಯರಿಗೆ ೧೦ ತಿಂಗಳ ರಜಾ ಮತ್ತು ತಿಂಗಳಿಗೆ ೧೨೫೦ ರೂ ವಿರಾಮವೇತನ ಕೊಡಲಾಗುವದೆಂದು ವರದಿ.

ಚಿತ್ರದುರ್ಗ ಜಿಲ್ಲೆಯ ಕ್ಷಾಮ ಪೀಡಿತರಾದ ಬಡವರಿಗೆ ಬಟ್ಟೆಬರೆ ಹಂಚುವ ನಿಮಿತ್ತ ಬೆಂಗಳೂರೆ ನಗರ ಸಭೆ ೫೦೦೦ ದಾನಮಾಡಿದೆ.

## ಮೈಸೂರ ಕಾಂ. ಅಧ್ಯಕ್ಷರಾಗಿ ಶ್ರೀ ಕೆ. ಸಿ. ರೆಡ್ಡಿಯವರ ಆಯ್ಕೆ

### ವಿಧಾಯಕ ಸಭಾಸದಸ್ಯತ್ವಕ್ಕೆ ರಾಜಿನಾಮೆ

ಕಳೆದ ತಿಂಗಳ ಕೊನೆಯದಿನ ನಡೆದ ಅ. ಮೈಸೂರು ಕಾಂಗ್ರೆಸ್ ಅಧ್ಯಕ್ಷ ಆಯ್ಕೆಯಲ್ಲಿ ಶ್ರೀ ಕೆ. ಚಂಗಲರಾಯರಡ್ಡಿಯವರು ಬಹುಮತದಿಂದ ಆರಿಸಿ ಬಂದರು. ಅವರ ಪ್ರತಿಸ್ಪರ್ಧಿಗಳಾಗಿ ನಿಂತಿದ್ದ ಸಿದ್ದಲಿಂಗಯ್ಯನವರಿಗೆ ಬೆಂಗಳೂರು ಜನರ ಮತ್ತು ಜಿಲ್ಲೆಯಲ್ಲಿ ಬಹಳ ಮತಗಳು ಬಿದ್ದಿದ್ದರೂ ಇತರ ಜಿಲ್ಲೆಗಳಲ್ಲಿ ಕಡಿಮೆ ಮತಗಳೂ ಬಿದ್ದಿದ್ದರಿಂದ ಅವರು ಸೋತರು.

ಅಧ್ಯಕ್ಷರಾಗಿ ಆರಿಸಿ ಬಂದಿರುವ ಶ್ರೀ ರೆಡ್ಡಿಯವರು ಮೈಸೂರ ನ್ಯಾಯವಿಧಾಯಕ ಸಭೆಯ ಸದಸ್ಯರೂ ಅಲ್ಲಿಯ ಕಾಂಗ್ರೆಸ್ ಪಕ್ಷದ ನಾಯಕರೂ ಆಗಿದ್ದಾರೆ. ಅಧ್ಯಕ್ಷರಾದ ಮೇಲೆ ಅವರು ವಿಧಾಯಕ ಸಭೆಯಲ್ಲಿ ಉಳಿಯುವದು ಉಚಿತವಾದೀತೆ ಎಂಬ ಬಗ್ಗೆ ವಾದವಿವಾದಗಳೆದ್ದವು ಶ್ರೀಯುತರು ಈ ವಿವಾದಗಳಿಗೆಲ್ಲ ಅವಕಾಶವಿಲ್ಲದಂತೆ ವಿಧಾಯಕ ಸಭೆಯ ಸದಸ್ಯತ್ವ ಹಾಗು ಕಾಂಗ್ರೆಸ್ ಪಕ್ಷದ ನಾಯಕತ್ವಕ್ಕೆ ರಾಜೀನಾಮೆ ಕೊಟ್ಟಿದ್ದಾರೆ.

ಘಟನಾ ಸಮಿತಿಯಲ್ಲಿ ಮೈಸೂರಿಗೆ ಸಿಗುವ ೭ ಸ್ಥಾನಗಳಿಗೆ ೩ನ್ನು ಜನರ ಶಾಸನ ಸಭೆಯಿಂದಲೂ ೪ ಜನರನ್ನು ಪ್ರತಿನಿಧಿ ಸಭೆಯಿಂದಲೂ ಆರಿಸಿ ಹೊಸ ದಿವಾಣರಾದ ಸರ್ ರಾಮಸ್ವಾಮಿ ಮುದಲಿಯಾರರ ನೇತೃತ್ವದಲ್ಲಿ ಕಳಿಸಬೇಕೆಂದು ಗೊತ್ತಾಗಿದೆಯಂತೆ.



## ವ್ಯಾಪಾರ ಪ್ರಪಂಚ

### ಮುಂಬಯಿ ಶೇರಪೇಟೆ

ತಾ. ೭

ಕಳೆದ ವಾರದಲ್ಲಿಯೂ ಈ ವಾರದಲ್ಲಿಯೂ ಶೇರ ಪೇಟೆಗಳು ತಿಲಕ ಪುಣ್ಯತಿಥಿ ಮೊದಲಾದವುಗಳ ನಿಮಿತ್ತ ಮುಚ್ಚಿದ್ದ ದಿನಗಳೇ ಹೆಚ್ಚು. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೩೪೪೦-೦-೦ ಕ್ಕಿಳಿದು ೩೪೫೭-೮-೦ ವರೆಗೂ ಏರಿ ಪುನಃ ೩೪೪೬-೮-೦ ಕ್ಕೆ ಮರಳಿದವು. ಡಾಯಿಂಗ್ ಪಾಲುಗಳು ಕಳೆದ ವಾರದ ವರದಿಯ ಕಾಲಕ್ಕೆ ಬಹಳ ಇಳಿಮುಖವಾಗಿದ್ದುದು ಬಲಗೊಂಡು ೩೦೫೦-೦-೦ ಕ್ಕೇರಿದೆ. ಕೋಹಿನೂರು ೧೧೩೫-೦-೦ ರಿಂದ ೧೧೪೦-೦-೦ ಕ್ಕೇರಿ ೧೧೧೮-೦-೦ ಕ್ಕಿಳಿಯಿತು. ಸ್ವದೇಶಿ ೯೩೫—೦—೦ ರಿಂದ ೯೭೨-೦-೦ ಕ್ಕೇರಿದರೆ ಗೋಕಾಕ ೫೩೮-೦-೦ ಕ್ಕೇರಿ ೫೩೬-೦-೦ ಕ್ಕಿಳಿಯಿತು. ಸೆಂಟ್ರಲ ಇಂಡಿಯಾ ೫೪೦-೦-೦ ರಿಂದ ೫೧೭—೦—೦ ಕ್ಕೆ ಬಂತು. ಬ್ಯಾಂಕುಗಳಲ್ಲಿ ಸೆಂಟ್ರಲ ಬ್ಯಾಂಕ್ ೧೫೩-೦-೦ ರಿಂದ ೧೫೦-೦-೦ ಕ್ಕೂ ಇಂಪೀರಿಯಲ್ ಎಫ್. ಸಿ. ೩೩೦೦-೦-೦ ರಿಂದ ೩೩೦೫-೦-೦ ರಲ್ಲೂ ರಿಝರ್ವ ಬ್ಯಾಂಕು ೧೭೩-೦-೦ ರಿಂದ ೧೭೯-೦-೦ ಕ್ಕೂ ಸ್ಥಿತ್ಯಂತರಗೊಂಡಿವೆ.

ಜಿ. ಪಿ. ನೋಟುಗಳು ೧೦೬—೧೦—೦ ರಿಂದ ೧೦೬—೬—೦ ಕ್ಕೂ ೩॥ ದರದ ೧೯೪೭-೫೦ ಸಾಲ ೧೦೨-೧೦-೦ ರಲ್ಲೂ ಇವೆ.

### ಚಿನ್ನ—ಬೆಳ್ಳಿ

ಚಿನಿವಾರಕಟ್ಟೆಯಲ್ಲಿ ಬೆಲೆಗಳು ಪುನಃ ತುಸು ತುಸುವೆ ಏರತೊಡಗಿವೆ. ತಯಾರಿ ಚಿನ್ನ ೯೪-೦-೦ ರಿಂದ ೯೬—೧೧—೦ ಕ್ಕೇರಿ ೯೬-೦-೦ ರಲ್ಲಿದೆ. ವಾಯದಾ ೯೫—೧೦—೦ ಸಾವರೀನ್ ೬೫-೦-೦ ಬೆಳ್ಳಿ (ತಯಾರಿ) ೧೬೪-೭-೦ ರಿಂದ ೧೬೭—೮—೦ ಕ್ಕೇರಿ ೧೬೬-೧೨-೦ ಕ್ಕೆ ಬಂತು. ವಾಯದಾ ದರವೂ ಅಷ್ಟೇ.

### ಅರಳೆ

ಇಷ್ಟರಲ್ಲೇ ಎಂದರೆ ತಾ. ೯ ಕ್ಕೆ ಅರಳೆ ಸಮಿತಿ ಅರಳೆಯ ಪರಮಾವಧಿ ಮತ್ತು ಕನಿಷ್ಠ ದರಗಳ ಬಗ್ಗೆ ನಿರ್ಣಯವನ್ನು ಹೊರಗೆಡಹಲಿದೆ. ಸಾಮಾನ್ಯವಾಗಿ ಅರಳೆ ಬೆಳೆಯುವವರಲ್ಲಿ ಸರಕಾರದ ಸಹಾನುಭೂತಿ ಇಲ್ಲವೆಂಬ ಸಂದೇಹ ರೂಢವಾಗಿದೆ. ಅದರಿಂದ ಪೇಟೆ ಮಂದೀ ಧೋರಣೆ ತೋರುತ್ತಿದೆ. ೪೫೫—೦—೦ ಕ್ಕಿಳಿದು ಹೋಗಿದ್ದ ಸಪ್ಟೆಂಬರ ವಾಯಿದೆ ಅರಳೆ ೪೯೯-೪-೦ ಕ್ಕೆ ಸುಧಾರಿಸಿದರೂ ಮುಂದೆ ೪೫೧—೧೨—೦ ಕ್ಕೆ ಬಂದು ಪುನಃ ೪೫೪-೪-೦ ಕ್ಕೇರಿತು.

### ಎಣ್ಣೆಕಾಳು

| | |
|---|---|
| ಶೇಂಗಾ | ೧೧೧—೦—೦ |
| ಅಗಸಿ | ೨೮—೬—೦ |
| ಅಗಸಿ ಎಣ್ಣೆ | ೧೧—೮—೦ |

### ಶಿವಮೊಗ್ಗೆ

ತಾ ೬

| | | | |
|---|---|---|---|
| ಅಡಿಕೆ ದೇಶಾವರ | ನಂ ೧ | ಮಣ ೧ ಕ್ಕೆ | ೨೭-೩೧ |
| ,, | ,, | ೨ | ೨೪—೨೭ |
| ರಾಜಾ ಅಲವು | | | ೨೪—೨೮ |
| ಸುಲಿ | | | ೨೭—೩೦ |
| ವಂತಿ | | | ೨೦—೨೧ |
| ಬೆಟ್ಟೆ | | | ೧೮—೧೯ |
| ಮೆಣಸು | | | ೧೯—೨೦ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೦ |
| ,, | ನಂ. ೨ | ೨೯೦ |
| ,, | ನಂ. ೩ | ೨೮೦-೨೮೫ |
| ಜಿನ | | ೨೨೫-೨೩೦ |
| ಸಾಜಿನ | | ೨೦೫-೨೧೦ |
| ಡಬಲರೋಲರ | | ೨೦೫-೨೧೫ |

## ಸರ್ ರಾಮಸ್ವಾಮಿಯವರು ಅಧಿಕಾರ ವಹಿಸಿಕೊಂಡರು

### "ಈಗಲೇ ಏನೂ ಹೇಳಲಾರೆ"

### ಹೊಸ ಪರಂಪರೆಯ ಪ್ರಾರಂಭ ?

ಮೊದಲೇ ನಿರ್ದಿಷ್ಟವಾದಂತೆ ಮೈಸೂರು ಸಂಸ್ಥಾನದ ಹೊಸ ದಿವಾಣರಾದ ಸರ್ ಅರ್ಕಾಟ ರಾಮಸ್ವಾಮಿ ಮುದಲಿಯಾರರು ತಾ. ೭ ಕ್ಕೆ ಮದರಾಸಿನಿಂದ ಬಂದು ಅಧಿಕಾರವನ್ನು ವಹಿಸಿಕೊಂಡರು. ಬೆಂಗಳೂರಲ್ಲಿಯೂ ಮೈಸೂರಲ್ಲಿಯೂ ಅವರಿಗೆ ಹಲವು ಸಂಘ ಸಂಸ್ಥೆಗಳೂ ರಾಜಕೀಯ ಪಕ್ಷಗಳೂ ಸ್ವಾಗತ ಬಯಸಿದವು. ಶ್ರೀ ಗುರುವಾರೆಡ್ಡಿಯವರ ಪ್ರಜಾಪಕ್ಷದವರು ಹೊಸ ದಿವಾಣರ ಸ್ವಾಗತಕ್ಕೆ ಮೊದಲಿಂದಲೇ ಸಿದ್ಧತೆ ನಡೆಸಿದ್ದರು. ಕೇಂದ್ರ ಮುಸ್ಲಿಂ ಸಂಘದವರೂ ಅವರಿಗೆ ಸ್ವಾಗತವಿತ್ತರು.

ಮಧ್ಯಾಹ್ನ ಸರ್ ಮುದಲಿಯಾರರು ಮೈಸೂರಿಗೆ ತೆರಳಿದರು. ಅಲ್ಲಿ ಶ್ರೀ ಮನ್ಮಹಾರಾಜರ ದರ್ಶನವನ್ನು ತೆಗೆದುಕೊಂಡರು. ಆ ಮೇಲೆ ಸರಕಾರಿ ವಸತಿಯಾದ "ಲೇಕ್‌ವ್ಯೂ" ಕ್ಕೆ ತೆರಳಿದರು.

### ಈಗಲೇ ಏನೂ ಹೇಳಲಾರೆ

ಅವರ ಬಾಯಿಯಿಂದ ಏನನ್ನಾದರೂ ಹೊರಡಿಸಲು ಪ್ರಯತ್ನಿಸಿದ ಪತ್ರಿಕೋದ್ಯೋಗಿಗಳಿಗೆ ಅವರು ಬೆಂಗಳೂರಲ್ಲಿ, ಈಗಲೆ ರಾಷ್ಟ್ರಸಂಘದ ಸಭೆಗಾಗಿ ವಾಶಿಂಗ್‌ಟನ್ನಿಗೆ ಹೋಗುವವನಿದ್ದೇನೆ ಎಂದು ಹೇಳಿ ನುಣಚಿಕೊಂಡರು. ಯುಕ್ತ ರಾಷ್ಟ್ರಸಂಘದೊಡನಿದ್ದ ತಮ್ಮ ಸಂಬಂಧ ಈಹೊಸ ಪದವಿಯನ್ನು ಸ್ವೀಕರಿಸಿದ್ದರಿಂದ ಏನೂ ಬದಲಾಗುವದಿಲ್ಲೆಂದೂ ಅವರು ಸ್ಪಷ್ಟೀಕರಿಸಿದರು. ಅವರು ಯುಕ್ತರಾಷ್ಟ್ರಗಳ ಆರ್ಥಿಕ ಹಾಗು ಸಾಮಾಜಿಕ ಭದ್ರತೆಯ ಸಮಿತಿಯ ಅಧ್ಯಕ್ಷರಾಗಿಯೆ ಉಳಿಯುವರು.

### ಪುಲ್ಲಾರೆಡ್ಡಿಯವರ ನಿವೃತ್ತಿ

ಕಂದಾಯ ಮಂತ್ರಿಗಳಾಗಿದ್ದ ಶ್ರೀ ಪುಲ್ಲಾರೆಡ್ಡಿಯವರು ತಮ್ಮ ಅಧಿಕಾರಾವಧಿ ಮುಗಿಯಲು ಇನ್ನೂ ಬಹಳ ತಿಂಗಳುಗಳುಳಿದಿದ್ದರೂ ನಿವೃತ್ತರಾಗಿ ಮದ್ರಾಸಿಗೆ ತೆರಳಿದ್ದಾರೆ. ಮದ್ರಾಸ್ ಸರಕಾರದವರು ಪುನಃ ಅವರ ಸೇವೆಯನ್ನಪೇಕ್ಷಿಸಿದ್ದರಿಂದ ಅವರು ಅಧಿಕಾರಾವಧಿಗೆ ಮೊದಲೇ ನಿವೃತ್ತರಾದರೆಂದು ಸರಕಾರಿ ಪ್ರಕಟನೆ ಹೇಳುತ್ತದೆ. ಆದರೆ ಶ್ರೀ ಪುಲ್ಲಾರೆಡ್ಡಿಯವರು ಅಂತರಂಗ ವರ್ಗಗಳಲ್ಲಿ ಅಪ್ರಿಯರಾಗಿದ್ದರೆಂದೂ ಮದ್ರಾಸ್ ಸರಕಾರದವರು ಅವರ ಸೇವೆಯನ್ನು ಅಪೇಕ್ಷಿಸಿದ ನೆವ ಹೂಡಿ ಬೇಕೆಂದೇ ಅವರನ್ನು ಹೊರದೂಡಲಾಯಿತೆಂದೂ ಬಲ್ಲವರ ತರ್ಕ. ಇದಲ್ಲದೆ ಪುಲ್ಲಾರೆಡ್ಡಿಯವರು ನ್ಯಾಪತಿ ಮಾಧವರಾಯರಬಳಿಕ , ದಿವಾಣ ಪಟ್ಟಕ್ಕೆ ಹುದ್ದರಿಯಾಗಿದ್ದರೆಂಬುದು ಜನಜನಿತ. ಆ ಆಸೆಗೆ ಕೊಡಲಿ ಬಿದ್ದುದರಿಂದ ಅವರು ಅಕಾಲದಲ್ಲಿ ನಿವೃತ್ತರಾಗಲು ಒಪ್ಪಿರಬಹುದೇನೋ ?

### ನಿರ್ಬಂಧಗಳ ಉಪಸಂಹಾರ

ಸರ್ ಮುದಲಿಯಾರರ ಆಡಳಿತದಲ್ಲಿ ಎಲ್ಲವೂ ಹೊಸದಾಗಿ ಪ್ರಾರಂಭವಾಗುವದೇನೋ ಎಂಬಂತೆ ಅವರು ಅಧಿಕಾರ ವಹಿಸಿಕೊಂಡ ದಿನವೇ ಬೆಂಗಳೂರು ಕೋಲಾರ, ಶಿವಮೊಗ್ಗೆಗಳಲ್ಲಿದ್ದ ಸಭೆ ಮೆರವಣಿಗೆಗಳ ಮೇಲಿನ ನಿರ್ಬಂಧ ದೂರಮಾಡಲ್ಪಟ್ಟಿದೆ. ಇದು ಹೊಸ ಮನ್ವಂತರದ ಪ್ರಾರಂಭದ ದ್ಯೋತಕವಾಗಿದ್ದರೆ ಪರಕೀಯರೆಂದು ಪ್ರಜೆಗಳ ಸಂಶಯಕ್ಕೆ ಗುರಿಯಾಗಿರುವ ಮುದಲಿಯಾರರು ಕಾಲಾಂತರದಲ್ಲಿ ಈ ಪೂರ್ವಗ್ರಹವನ್ನು ಅಳಿಸಲು ಸಮರ್ಥರಾಗಬಹುದೇನೋ?

## ದಕ್ಷಿಣ ಕನ್ನಡ

ದಕ್ಷಿಣ ಕನ್ನಡದಲ್ಲಿ ಸೀದಾ ಪ್ರಮಾಣದಲ್ಲಿ ಕೊಡುತ್ತಿದ್ದ ೧೨ ಔನ್ಸ ಅಕ್ಕಿಯನ್ನು ೮ ಔನ್ಸಿಗಿಳಿಸಲಾಗಿದ್ದು ಅದರ ಬದಲು ಗೋದಿಯ ಪ್ರಮಾಣವನ್ನು ೨ರಿಂದ ೪ ಔನ್ಸಿಗೇರಿಸಲಾಗಿದೆ.

ಮದರಾಸು ಸರಕಾರದವರು ಮಂಗಳೂರಲ್ಲಿ ಸ್ಥಾಪಿಸಬೇಕೆಂದು ಮಾಡಿರುವ ಆಯುರ್ವೇದ ಕಾಲೇಜನ್ನು ಉಡುಪಿಯಲ್ಲಿ ಅಥವಾ ಅದರ ಸೆರೆಹೊರೆಯಲ್ಲಿ ಸ್ಥಾಪಿಸಬೇಕೆಂದು ಪ್ರಾರ್ಥಿಸಿ ಆ ಬಗ್ಗೆ ಮಂತ್ರಿಮಂಡಲದ ಕಡೆಗೆ ಶಿಷ್ಟಮಂಡಲವನ್ನು ಕಳಿಸಬೇಕೆಂದು ಮಣಿಪಾಳದ ಅಕಾಡೆಮಿ ಆಫ್ ಜನರಲ್ ಎಜುಕೇಶನ್ ಆಡಳಿತ ಸಮಿತಿಯವರು ನಿರ್ಣಯಿಸಿದ್ದಾರೆ.

ಪುತ್ತೂರಿನಲ್ಲಿ ಸಟ್ಟಾ ಆಡುವವರ ಮೇಲೆ ತೀಕ್ಷ್ಣ ಕ್ರಮ ಪ್ರಾರಂಭವಾಗಿದೆ ಈಗಾಗಲೆ ಅನೇಕರಿಗೆ ದಂಡ ವಿಧಿಸಲ್ಪಟ್ಟಿದೆ.

ಪುತ್ತೂರಿನ ಹೊಳ್ಳಿಎಂಬಲ್ಲಿ ನೆರೆಯ ಅನಾಹುತದಿಂದ ಅನೇಕ ಪ್ರಾಣಿಗಳೂ ಕೆಲ ಮನುಷ್ಯರೂ ಪ್ರವಾಹದಲ್ಲಿ ತೇಲಿ ಹೋದರೆಂದು ತಿಳಿಯುತ್ತದೆ. ಮುದುಕಿಯೊಬ್ಬಳು ಹೊಳ್ಳಿಯಿಂದ ನಾಲ್ಕೈದು ಮೈಲು ದೂರದವರೆಗೂ ತೇಲಿಕೊಂಡು ಹೋಗಿದ್ದು ಅವಳ ಹೆಣ ಒಳಂಕಮೇರೆಬಯಲ್ಲಿ ಸಿಕ್ಕಿತು.

ಈಚೆಗೆ ಕರ್ನಾಟಕ ಹಿಂದುಳಿದ ವರ್ಗಗಳ ಮಹಾಮಂಡಲದ ಅಧ್ಯಕ್ಷರಾದ ಶ್ರೀ ಗೋಪಾಲ ಸಾಲೆನ್ನ ಅವರ ದಕ್ಷಿಣ ಕನ್ನಡ ಮತ್ತು ಮಲಬಾರಿನಲ್ಲಿರುವ ಅಸ್ಪೃಶ್ಯರ ಸಂಕಟಗಳನ್ನು ಮದ್ರಾಸ ಮುಖ್ಯಮಂತ್ರಿಗಳಲ್ಲಿ ನಿವೇದಿಸಿದ್ದು ಅವರು ಹರಿಜನೋದ್ಧಾರಕ್ಕಾಗಿ ಯೋಗ್ಯ ಕ್ರಮಗಳನ್ನು ಆಚರಣೆಗೆ ತರುವದಾಗಿ ಭರವಸೆಯಿತ್ತಿರುವರೆಂದೂ ಈಗ ಶ್ರೀ ಸಾಲೆನ್ನರು ಜಿಲ್ಲೆಯ ಹರಿಜನರ ಉದ್ಧಾರಕ್ಕಾಗಿ ಒಂದು ಯೋಜನೆಯನ್ನು ಸಿದ್ಧಗೊಳಿಸಿ ಮಂತ್ರಿಮಂಡಳದ ಮುಂದಿಡುವ ಸಿದ್ಧತೆ ನಡೆಸಿರುವರೆಂದೂ ತಿಳಿಯುತ್ತದೆ.

## ವಿಶ್ವಕರ್ನಾಟಕದ ಮೇಲೆ ಗದೆ!

### ಎರಡು ತಿಂಗಳು ನಿಲ್ಲಿಸಲ್ಪಟ್ಟಿತು

ಹಳೆಯ ದಿವಾಣ ಪರಂಪರೆಯ ಕೊನೆಯ ಒದೆತವೋ ಎಂಬಂತೆ ಬೆಂಗಳೂರಿನ "ವಿಶ್ವಕರ್ನಾಟಕ" ದಿನ ಪತ್ರಿಕೆಯ ಮೇಲೆ ಸರಕಾರದ ಗದೆ ಎರಗಿದೆ. ಕಳೆದ ವಾರದಲ್ಲಿ ವಿಶ್ವಕರ್ನಾಟಕದಲ್ಲಿ ಪ್ರಕಟವಾದ ಎರಡು ಅಗ್ರಲೇಖಗಳ ಸಂಬಂಧದಲ್ಲಿ ಕ್ರಮ ಕೈಕೊಂಡು ಸರಕಾರದವರು ಆ ಪತ್ರಿಕೆಯ ಸಂಚಿಕೆಗಳನ್ನೆಲ್ಲ ಮುಟ್ಟುಗೋಲ ಹಾಕಿದ್ದಲ್ಲದೆ ಎರಡು ತಿಂಗಳ ಕಾಲ ವಿಶ್ವಕರ್ನಾಟಕ ದಿನಪತ್ರಿಕೆಯನ್ನು ಮುದ್ರಿಸತಕ್ಕದ್ದಲ್ಲ, ಪ್ರಕಟಿಸತಕ್ಕದ್ದಲ್ಲ, ಮಾರತಕ್ಕದ್ದಲ್ಲ ಎಂದು ಸಂಪಾದಕ ತಿರುಮಲೆ ತಾತಾಚಾರ್ಯ ಶರ್ಮರ ಮೇಲೆ ನೋಟೀಸು ಜಾರಿಮಾಡಿದ್ದಾರೆ.

ಮೇಲ್ಕಂಡ ಎರಡು ಅಗ್ರಲೇಖಗಳಲ್ಲಿ "ಮಾಡಿದ್ದುಣ್ಣೋ ಮಹಾರಾಯ" ಎಂಬ ಲೇಖ ಹೊರಬಿದ್ದ ದಿವಾಣರಾದ ಮಾಧವರಾಯರನ್ನು ಟೀಕಿಸಿತ್ತು. ಅವರ ಅಲ್ಪ ಅಧಿಕಾರಾವಧಿಯಲ್ಲಿ ಅವರು ಮಾಡಿದ ಅಕಾರ್ಯಗಳನ್ನು ಲೆಕ್ಕಿಸಿ, ದಿವಾಣಗಿರಿಯ ನಶ್ವರತೆಯನ್ನೂ ಅರುಹಲು ಅದು ಪ್ರಯತ್ನಿಸಿತ್ತು. ಇನ್ನೊಂದು ಮೈಸೂರ ಅರಸು ಕುಟುಂಬದಲ್ಲಿ ದ್ರೋಹವನ್ನು ಪ್ರದರ್ಶಿಸುವ ಅನಾಮಧೇಯನೊಬ್ಬನ ಪ್ರಕಟನೆ.

### ಕಾಂಗ್ರೆಸ್ ಪಕ್ಷದ ಖಂಡನೆ

ಮೈಸೂರ ಪ್ರಜಾಪ್ರತಿನಿಧಿ ಸಭೆಯ ಕಾಂಗ್ರೆಸ್ ಪಕ್ಷದವರು ಪತ್ರಿಕಾ ಸ್ವಾತಂತ್ರ್ಯವನ್ನು ಭಂಗಿಸಿ "ವಿಶ್ವಕರ್ನಾಟಕ"ದ ಮೇಲೆ ಸರಕಾರ ಹೊರಡಿಸಿದ ಆಜ್ಞೆಯನ್ನು ಖಂಡಿಸಿದ್ದಾರೆ. ಇದಲ್ಲದೆ ಪ್ರ. ಪ್ರ. ಸಭೆಯು ದಸರಾ ಅಧಿವೇಶನಕ್ಕೆ ಕಳುಹಬೇಕಾದ ಪ್ರಶ್ನೆಗಳ ಮತ್ತು ನಿರ್ಣಯಗಳ ಚರ್ಚೆ ನಡೆಸಲಾಯಿತು.

# ಹಿಂದೀ ಮಧ್ಯಮವರ್ಗದ ಪಾಡು

## ಯುದ್ಧದಿಂದೊದಗಿದ ಆರ್ಥಿಕ ದುಃಸ್ಥಿತಿ

### ಅಸಂತುಷ್ಟ ಕುದಿಯುತಿದೆ

( ಪ್ರೊ. ಸಿ. ಎನ್. ವಕೀಲರಿಂದ )

ಯುದ್ಧ ಕಾಲದಲ್ಲಿ ಪ್ರಾರಂಭವಾಗಿ, ಯುದ್ಧಕ್ಕೆ ಹಣ ಒದಗಿಸಲು ಉಪಯೋಗಿಸಿದ ಅತಿ ಪ್ರಸರಣಾತ್ಮಕ ನೀತಿಯಿಂದ ಇನ್ನಷ್ಟು ಬಿಗಿಯಾದ ಬೆಲೆಗಳ ಏರಿಕೆ ಸ್ಥಿರವಾಗಿರುವ ಅಥವಾ ಇಳಿಯುವ ಲಕ್ಷಣ ಇನ್ನೂ ತೋರಲೊಲ್ಲದು. ಯುದ್ಧ ಮುಗಿದು ಒಂದು ವರ್ಷವಾಯಿತು. ಯುದ್ಧ ಮುಗಿದೊಡನೆ ಬೆಲೆಗಳು ಒಮ್ಮಿಂದೊಮ್ಮೆ ಅಧಃಪಾತ ಹೊಂದಬಹುದೆಂದು ಕೆಲವರು ನಿರೀಕ್ಷೆಯಿಂದ ಅದಕ್ಕೆ ಕೆಲವೊಂದು ಪ್ರತಿಬಂಧೋಪಾಯಗಳನ್ನು ಯೋಜಿಸಿದ್ದರು. ಬೆಲೆಗಳ ಮುಗ್ಗಟ್ಟಿನ ವಿರುದ್ಧ ಉಪಾಯ ಕೈಕೊಂಡರೆ ಅದರಿಂದ ಈಗಿರುವ ಅತಿಪ್ರಸರಣ ಇನ್ನಷ್ಟು ತೊಡಕುಂಟಾದೀತೆಂದೂ ಅವರಿಗೆ ತಿಳಿಯಲಿಲ್ಲ. ಬೇಕಾದ ಮುಹೂರ್ತವನ್ನು ನಿರ್ಣಯಿಸುವದು ಕಠಿನ ಕೆಲಸ ನಿಜ. ಆದರೆ ಅಕಾಲದಲ್ಲಿ ಕ್ರಮ ಕೈಕೊಂಡರೆ ಅವು ಬೆಲೆಗಳನ್ನು ಇನ್ನಷ್ಟು ಏರಿಸಬಹುದೆಂದು ಅವರಿಗೆ ಎಚ್ಚರಿಕೆ ಕೊಡಲಾಯಿತು.

### ನಿರ್ದಿಷ್ಟ ಉತ್ಪನ್ನದ ವರ್ಗ

ಈ ಸರಕಾರಿ ಧೋರಣದ ಇತರ ಭಾವಗಳನ್ನು ಬದಿಗಿಟ್ಟು ಈ ಲೇಖದಲ್ಲಿ ಸಂಬಳ ಪಡೆಯುವ ಮಧ್ಯವರ್ಗದ ಮೇಲೆ ಅದು ಮಾಡಿದ ಪರಿಣಾಮವನ್ನು ಮಾತ್ರ ಚರ್ಚಿಸಲಾಗುವದು. ಕಾರಕೂನರು, ಅಧ್ಯಾಪಕರು, ಶಿಕ್ಷಕರು ಮತ್ತು ಸರಕಾರದ ಹಾಗು ಖಾಸಗಿ ಕಚೇರಿಗಳಲ್ಲಿ ದುಡಿಯುವ ಕೆಳ ಮಟ್ಟದ ಸಂಬಳದ ನೌಕರರೆಲ್ಲ ಈ ವರ್ಗಕ್ಕೆ ಸೇರುತ್ತಾರೆ. ಅವರೆಲ್ಲರೂ ವಿದ್ಯಾವಂತರೆ. ಅವರ ಶಿಕ್ಷಣದ ಮಟ್ಟ ವಿವಿಧವಾಗಿರಬಹುದು, ಅಷ್ಟೆ.

ಈ ವರ್ಗದ ಜನರು ಯುದ್ಧದಿಂದ ಅತ್ಯಂತ ಪೀಡೆಗೊಳಗಾಗಿದ್ದಾರೆ. ಅವರ ವೆಚ್ಚಗಳು ನಾಲ್ಕುಪಟ್ಟು ಹೆಚ್ಚಿವೆ. ಆದರೆ ಉತ್ಪನ್ನ ಮಾತ್ರ ಅಷ್ಟು ಏರಿಲ್ಲ. ಅದ್ದರಿಂದ ಅವರು ಹಳೆಯ ಉಳಿವೆಯನ್ನಾದರೂ ವೆಚ್ಚಮಾಡಬೇಕು. ಇಲ್ಲದಿದ್ದರೆ ಸಾಲಮಾಡಬೇಕು. ಬಹಳ ಮಟ್ಟಿಗೆ ಅವರು ಆಹಾರ ವಸ್ತ್ರ ಮೊದಲಾದವುಗಳನ್ನು ಕಡಿಮೆ ಮಾಡಿಕೊಂಡು ತಮ್ಮ ಜೀವನದ ಮಟ್ಟವನ್ನು ಇಳಿಸಬೇಕಾಗಿ ಬಂತು.

ಮುಂಬಯಿ ನಗರದಲ್ಲಿ ಈ ಮಧ್ಯಮ ವರ್ಗದ ಪರಿಸ್ಥಿತಿಯನ್ನು ಕುರಿತು ವಿಶ್ವವಿದ್ಯಾಲಯದ ಅರ್ಥಿಕ ಶಾಖೆಯವರು ಪರೀಕ್ಷಿಸಿದಾಗ ಅನೇಕ ವಿಷಯಗಳು ಹೊರಬಿದ್ದವು. ಈ ನಿರೀಕ್ಷಣೆ ೧೯೪೪—೪೫ ನೆ ಇಸವಿಯದು. ಅಂದಿನಿಂದ ಬೆಲೆಗಳು ಇನ್ನಷ್ಟು ಏರಿವೆ. ಈಗಿರುವ ಏರಿಕೆಯ ಶಕ್ತಿಗಳು ಹೊಸ ಶಕ್ತಿಗಳು, ಸರಕಾರದ ಧೋರಣೆ ವ್ಯಾಪಾರಿಗಳ ಆಟ ಮತ್ತು ಅವಶ್ಯಕ ವಸ್ತುಗಳ ಸಾಮಾನ್ಯ ಕೊರತೆ ಇವೆಲ್ಲ ಸೇರಿ ಬೆಲೆಗಳನ್ನು ಏರಿಸಿವೆ. ಧಾನ್ಯ ವಸ್ತ್ರ ಮೊದಲಾದವುಗಳ ಬೆಲೆ ಮತ್ತೆ ಮೊನ್ನೆ ಮೊನ್ನೆ ಏರಿತು.

### ಜೀವನದ ಮಟ್ಟ ಬೆಳೆದಿದೆ

ಕೂಲಿಕಾರರ ಮಟ್ಟಿಗೆ ಈ ಪರಿಸ್ಥಿತಿಯ ಪ್ರತಿಬಿಂಬವನ್ನು ಬೀಸುತ್ತಿರುವ ಸಂಪಿನ ಗಾಳಿಯಲ್ಲಿ ಕಾಣಬಹುದಾದ ರೇಲ್ವೇ ಮುಷ್ಕರದ ಬೆದರಿಕೆ, ಟಪಾಲು ಪೇಡೆಗಳ ಸಂಪು ಇದರ ಪ್ರತಿಧ್ವನಿಗಳೇ ಆಗಿವೆ. ಖಾಸಗಿ ಮತ್ತು ಸರಕಾರಿ ಶಾಖೆಗಳಲ್ಲಿ ದುಡಿಯುತಿರುವ ಕೂಲಿಕಾರರು ಚೆನ್ನಾಗಿ ಸಂಘಟಿತರಾಗಿದ್ದು ತಮ್ಮ ದನಿಯನ್ನು ಸರಕಾರದ ಕಿವಿವರೆಗೆ ಮುಟ್ಟಿಸಲು ಸಮರ್ಥರಾಗಿದ್ದರೆ ಮಧ್ಯಮ ವರ್ಗದ ನೌಕರರು ಮಾತ್ರ ಅಸಂಘಟಿತರಾಗಿರುವದರಿಂದ ಅವರೇನೂ ಮಾಡಲಾರರು. ಮಧ್ಯಮ ವರ್ಗದವನಿಗೆ ಇನ್ನೊಂದು ಬಾಧಕವೂ ಇದೆ. ಅವನ ಸಾಮಾನ್ಯ ಜೀವನದ ಮಟ್ಟ ಕೂಲಿಕಾರನಿಗಿಂತ ಮೇಲಿನದು. ಅವನು ಶ್ರೀಮಂತರ ಅನುಕರಣೆ ಮಾಡುತ್ತಾನೆ. ಆಹಾರ ವಸ್ತ್ರ, ವಸತಿಗಳ ವಿಷಯದಲ್ಲಿ ಕೆಲ ಅಭ್ಯಾಸಗಳು ಅವನಿಗೆ ಅಂಟಿರುತ್ತವೆ. ಇವೆಲ್ಲದರ ವೆಚ್ಚ ಒಟ್ಟಿನ ಮೇಲೆ ಕೂಲಿಕಾರನ ವೆಚ್ಚಕ್ಕಿಂತ ಹೆಚ್ಚಾಗುತ್ತದೆ. ಈ ವರ್ಗದಲ್ಲಿ ಒಬ್ಬನು ಗಳಿಸಿ ಹಲವರುಣ್ಣುವ ಕುಟುಂಬಗಳೇ ಹೆಚ್ಚು. ಅವನಿಗೆ ದೊರೆಯುವ ತುಟ್ಟಿಭತ್ತೆ ಯುದ್ಧಪೂರ್ವದ ಸಂಬಳದಲ್ಲಿ ೧೫ ರಿಂದ ೩೦ ಶತಾಂಶದಷ್ಟಿರುತ್ತದೆ. ಕೂಲಿಕಾರರ ಕೂಲಿ ಬೆಲೆಗಳ ಏರಿಕೆಯನ್ನು ಅನುಸರಿಸಿ ಏರಿದೆ. ಹೀಗೆ ಕೂಲಿಕಾರರು ಯುದ್ಧಪೂರ್ವದ ಜೀವನದ ಮಟ್ಟವನ್ನು ಏರಿಸಲು ಕನಿಷ್ಠ ಅದನ್ನಾದರೂ ಉಳಿಸಿಕೊಳ್ಳಲು ಸಮರ್ಥರಾಗಿರುವಾಗ ಮಧ್ಯಮವರ್ಗದ ಜೀವನ ಮಟ್ಟ ಇಳಿದುಹೋಗಿದೆ.

ಈ ದೇಶದ ಬ್ರಿಟಿಶ ಸರಕಾರವೂ ಜನಪ್ರಿಯ ಸರಕಾರಗಳೂ ಕೂಲಿಕಾರರ ಬಗ್ಗೆ ಒಳ್ಳೆ ಅಸ್ಥೆ ವಹಿಸಿ ಅವರ ಹಿತಕ್ಕಾಗಿ ಕಾಯಿದೆಗಳನ್ನು ಮಾಡಿವೆ. ಇದು ಯೋಗ್ಯವೆ. ಆದರೆ ಮಧ್ಯಮ ವರ್ಗ ಮಾತ್ರ ಸಮಾಜದಲ್ಲಿ ಎಲ್ಲೆಲ್ಲಿಯೂ ದುರ್ಲಕ್ಷಕ್ಕೆ ಗುರಿಯಾಗಿದೆ. ಹಿಂದಿನ ಸರಕಾರಗಳು. ಅದನ್ನು ಕಡೆಗಣಿಸಿದವು ಹೊಸ ಜನಪ್ರಿಯ ಸರಕಾರಗಳು ಈ ಸಮಸ್ಯೆಯ ಪ್ರಚಂಡತೆಯನ್ನು ಇನ್ನೂ ಅರಿತುಕೊಂಡಿಲ್ಲ. ಈ ವರ್ಗದವರು ಅನುಭವಿಸುತಿರುವ ಕಷ್ಟಗಳನ್ನು ಮನಗಂಡಿಲ್ಲ.

### ಸಮಾಜದ ಬೆನ್ನೆಲುಬು

ಜನಪ್ರಿಯ ಸರಕಾರಗಳಿಗಿರುವ ನೈತಿಕ ಬೆಂಬಲ ಇದೇವರ್ಗದ್ದೆಂದು ಹೇಳಿದರೆ ತಪ್ಪಾಗದು. ಅದು ವಿದ್ಯೆಯಲ್ಲಿ ಮುಂದುವರಿದಿದೆ, ದಿನ ದಿನದ ರಾಜಕಾರಣವನ್ನು ಅರಿತುಕೊಂಡು ರಾಜಕೀಯ ಬದಲಾವಣೆಗಳನ್ನು ಮತ್ತು ರಾಷ್ಟ್ರೀಯ ಚಳವಳಿಯನ್ನು ಬೆಂಬಲಿಸುತ್ತದೆ. ರಾಷ್ಟ್ರೀಯ ಚಳವಳಿಯ ಅತಿ ಸಮರ್ಥ ಕಾರ್ಯಕರ್ತರಲ್ಲಿ ಕೆಲವರು ಈ ವರ್ಗದಿಂದ ಬಂದವರು. ಆದರೆ ಸಮಾಜದ ಬೆನ್ನೆಲುಬಾದ ಈ ವರ್ಗದ ಅರೈಕೆಯನ್ನೆ ಯಾರೂ ನೋಡದಿರುವದು ಶೋಚನೀಯ. ಬಂಡವಳಗಾರ ಸಂಸ್ಥೆಗಳಲ್ಲಿ ಅವರು ಮಲಮಕ್ಕಳು. ಅವರಿಗೆ ಮರ್ಯಾದೆಯನ್ನೂ ಕೊಡುವವರಿಲ್ಲ, ಸಂಬಳವೂ ಕಡಿಮೆ. ಸರಕಾರದ ಖಾತೆಗಳಲ್ಲಾದರೂ ಅಷ್ಟೆ.

### ಬಿರುಗಾಳಿ ಏಳುತಿದೆ

ಈ ವರ್ಗದಲ್ಲಿ ಕುದಿಯುತ್ತಿರುವ ಅಸಂತುಷ್ಟಿಯ ಕೆಲ ಸಂಜ್ಞೆಗಳು ಈಗಾಗಲೆ ಗೋಚರಕ್ಕೆ ಬಂದಿವೆ. ಮುಂಬಯಿ ಪ್ರಾಂತದ ಶಿಕ್ಷಕರ ಸಂಪು ಮೊಟ್ಟಮೊದಲು ಇದನ್ನು ಪ್ರದರ್ಶಿಸಿತು. ಹೊಸ ಸರಕಾರದ ಅಶ್ವಾಸನೆಯಿಂದ ಇದು ನಿಂತಿತು. ಬ್ಯಾಂಕ್ ಅಫ ಇಂಡಿಯಾದ ಕಾರಕೂನರ ಸಂಪು ಇದನ್ನೇ ಸೂಚಿಸುತ್ತದೆ. ಸೆಂಟ್ರಲ ಬ್ಯಾಂಕ್ ಕಾರಕೂನರ ಬೇಡಿಕೆಗಳನ್ನು ವ್ಯವಸ್ಥಾಪಕರು ವಿಚಾರಿಸುತಿದ್ದಾರೆ. ರಿಜರ್ವ ಬ್ಯಾಂಕಿನವರೂ ಈಚೆಗೆ ಕೆಳ ವರ್ಗದ ನೌಕರರ ಸಂಬಳವನ್ನು ಪುನರಾಲೋಚಿಸಿದ್ದಾರೆ. ಆದರೆ ಅದರ ಪರಿಣಾಮ ಹೊರಬಿದ್ದಿಲ್ಲ- ಬ್ಯಾಂಕ್ ಕಾರಕೂನರು ಕೆಲಮಟ್ಟಿಗೆ ಸಂಘಟಿತರಾಗಿದ್ದು ಬೇಡಿಕೆಗಳನ್ನು ಪರಿಣಾಮಕರವಾಗಿ ಮುಂದೊಡ್ಡಲು ಸಮರ್ಥರಾಗಿದ್ದಾರೆ.

ಈ ಪ್ರಾಮುಖ್ಯವಾದರೂ ಬಹಳ ಕಷ್ಟಕ್ಕೊಳಗಾದ ವರ್ಗ ಇನ್ನೂ ಕಷ್ಟಪಡುತ್ತ ಕ್ರಾಂತಿಕಾರಕ ಭಾವನೆಗಳನ್ನು ತಳೆಯಬಾರದೆಂದು ಜನಪ್ರಿಯ ಸರಕಾರಗಳ ಇಚ್ಛೆಯಿದ್ದರೆ ಅವರಿಗೆ ಒಡನೆ ಸಹಾಯವನ್ನೀಯುವದವಶ್ಯ. ಅವರ ಸಂಬಳವನ್ನು ಒಡೆಯರು ಹೆಚ್ಚಿಸುವಂತೆ ವ್ಯವಸ್ಥೆ ಮಾಡಬೇಕು. ಇದಲ್ಲದೆ ಅವರ ಪರಿಸ್ಥಿತಿಯನ್ನು ಪರಿಶೀಲಿಸಿ ಅದನ್ನು ಶಾಶ್ವತವಾಗಿ ಸುಧಾರಿಸುವ ಒಂದು ಯೋಜನೆಯನ್ನು ಕೈಕೊಳ್ಳಬೇಕು.

ಈ ವರ್ಗದ ಉತ್ಪನ್ನವನ್ನು ಗಮನಿಸಿದರೆ ಅದರ ಮೇಲೆ ಬೀಳುವ ಕರಭಾರ ಇತರ ವರ್ಗಗಳಿಗಿಂ ಹೆಚ್ಚಿರದು ಕಂಡಬಂದೀತು. ಹೀಗಿರುವಾಗ ಮುಂಬಯಿ ಪ್ರಾಂತದಲ್ಲಿ ಮಾರಾಟಕರವನ್ನು ಹೊರಿಸಿದರೆ ಈ ವರ್ಗಕ್ಕೆ ಇನ್ನಷ್ಟು ತೊಂದರೆಯಾಗುವದು.

ಕಾಂಗ್ರೆಸ್ ಮಂತ್ರಿಗಳು ತಮ್ಮ ಪೂರ್ವಾಧಿಕಾರಿಗಳಿಗಿಂತ ಕಡಿಮೆ ಸಂಬಳವನ್ನು ಪಡೆಯುತ್ತಿರುವದು ಅಭಿನಂದನೀಯ. ಆದರೆ ಬಡ ಮಧ್ಯಮವರ್ಗದ ಸಂಬಳವನ್ನು ಕೆಳಮಟ್ಟದಲ್ಲಿಡಲು ಈ ಆದರ್ಶವನ್ನು ಮುಂದೊಡ್ಡುವದು ಅನ್ಯಾಯವೇ ಸರಿ.

### ಕನಿಷ್ಠ ಸಂಬಳವನ್ನು ಗೊತ್ತುಪಡಿಸಿರಿ

ಇಲ್ಲಿ ವಿವರವಾದ ಸೂಚನೆಗಳನ್ನು ಕೊಡಲು ಎಡೆಯಿಲ್ಲ. ಆದರೆ ವಿಶಿಷ್ಟ ವರ್ಗದ ಕೆಲಸಗಳಿಗೆ ಕನಿಷ್ಠ ಸಂಬಳ ಪ್ರಮಾಣಗಳನ್ನು ಏಕೆ ಗೊತ್ತುಪಡಿಸಬಾರದೆಂದೋ ತಿಳಿಯದಾಗಿದೆ. ಅಂತೆಯೆ ವಸತಿ ಅಥವಾ ಮನೆ ಭತ್ತೆ, ಬೆಲೆಗಳ ಏರಿಕೆಗೆ ಸರಿ ಹೋಗುವ ತುಟ್ಟಿಭತ್ತೆ, ಪ್ರಾವಿಡೆಂಟ ಫಂಡ ಸೌಕರ್ಯ ಮೊದಲಾದವುಗಳನ್ನು ಒದಗಿಸಬೇಕಾಗಿದೆ. ಕಾಯಿದೆಯ ಮೂಲಕ ಒಡೆಯರು ವಿವಿಧ ವರ್ಗದ ಕೆಲಸಗಳಿಗೆ ವಿಶಿಷ್ಟ ಪ್ರಮಾಣದ ಸಂಬಳ ಕೊಟ್ಟೇತೀರಬೇಕೆಂದು ವಿಧಿಸಬಹುದು. ಇಲ್ಲದಿದ್ದರೆ ಬೇಡಿಕೆ-ಪೂರೈಕೆಗಳ ನಿಯಮಕ್ಕೆ ಈ ಬಡಪಾಯಿಗಳನ್ನು ಗುರಿ ಮಾಡಿದಂತಾಗುವದು. ಅವಸರದಿಂದ ಈ ಬಗ್ಗೆ ಕ್ರಮ ಕೈಕೊಳ್ಳಬೇಕಾಗಿದೆ. ಇಲ್ಲದಿದ್ದರೆ ಅನಿಷ್ಟ ಪರಿಣಾಮಗಳು ಫಲಿಸದಿರವು.

---

ಮುಂಬಯಿ ಸರಕಾರ
ನಾಗರಿಕ ಪೂರೈಕೆ ಖಾತೆ,
ಮುಂಬಯಿ ಕೋಟೆ, ೩ನೇ ಅಗಸ್ಟ ೧೯೪೬.

# ಆಜ್ಞೆ

**ನಂ. ೭೧೯/VIII-ಸಿ.:**— ಭಾರತ ಸಂರಕ್ಷಣ ಕಾಯಿದೆಯ ೮೧ನೇ ನಿಯಮದ (೨) ನೇ ಉಪನಿಯಮದ (ಅ), (ಬ) ಮತ್ತು (ಫ) ಕಲಮುಗಳಿಂದ ದೊರೆತ ಅಧಿಕಾರಗಳನ್ನು ನಡಿಸಿ ೧೪ ಫೆಬ್ರುವರಿ ೧೯೪೬ನೇ ಹಣಕಾಸಿನ ಖಾತೆ [ಪೂರೈಕೆ] ನಂ. ೭೧೯/VIII-ಸಿ ಮತ್ತು ೧೬ ಎಪ್ರಿಲ್ ೧೯೪೬ನೇ, ೧೦ ಮೇ ೧೯೪೬ ನೇ, ಮತ್ತು ೨೧ ಮೇ ೧೯೪೬ ನಾಗರಿಕ ಪೂರೈಕೆ ಖಾತೆಯ ನಂ. ೭೧೯/VIII-ಸಿ ಈ ಸರಕಾರೀ ಅಜ್ಞೆಗಳಿಂದ ಈಗಾಗಲೇ ಸುಧಾರಿಸಲ್ಪಟ್ಟ ೧೩ ನವ್ಹೆಂಬರ ೧೯೪೫ನೇ ಹಣಕಾಸಿನ ಖಾತೆ (ಪೂರೈಕೆ, ಸರಕಾರಿ ಅಜ್ಞೆ ನಂ, ೭೧೯/II ನ್ನು ಈ ಮುಂದೆ ಕೆಳಗಿನಂತೆ ತಿದ್ದುಪಡಿ ಮಾಡುವದಾಗಿ ಮುಂಬಯಿ ಸರಕಾರದವರು ವಿಧಿಸುತ್ತಾರೆ:—

೧೩ ನವ್ಹೆಂಬರ ೧೯೪೫ನೇ ಆ ಸರಕಾರೀ ಅಜ್ಞೆ ನಂ. ೭೦೦/II ಕ್ಕೆ ಜೋಡಿಸಿದ 'ಕ್ಷ' ಪರಿಶಿಷ್ಟದಲ್ಲಿ ಧಾರವಾಡ ಜಿಲ್ಲೆಯ ಮುಂದೆ ಇರುವ "ತಾಲೂಕಗಳು ಮುಂತಾದ್ದು" ಎಂಬ ತಲೆಬಂಹದ ಕೆಳಗೆ.

(ಅ) "ಧಾರವಾಡ"ಕ್ಕೆ ಬದಲಾಗಿ "[೧] ಹೆಬ್ಬಳ್ಳಿ [೨] ಕಳ್ಳೆ [೩] ಕಬ್ಬೆನೂರ [೪] ಇನಾಮ-ಹೊಂಗಲ [೫] ತಳವಾಯಿ [೬] ಮನಹಳ್ಳಿ [೭] ಹಾರೋಬೆಳವಡಿ ಈ ಏಳು ಹಳ್ಳಿಗಳನ್ನು ಹೊರತುಪಡಿಸಿ ಧಾರವಾಡ" ಎಂದು ಓದತಕ್ಕದ್ದು.

(ಬ) "ಹುಬ್ಬಳ್ಳಿ" ಬದಲು "[೧] ಮುಳಹಳ್ಳಿ [೨] ಯರಿನಾರಾಯಣಪುರ [೩] ಯರಗುಪ್ಪಿ [೪] ಹಿರೇನರ್ತಿ [೫] ಚಿಕ್ಕನರ್ತಿ [೬] ನಾಗರಹಳ್ಳಿ [೭] ಛಂಡಿವಾಡ [೮] ಶಿರಗುಪ್ಪಿ [೯] ಬ್ಯಾಹಟ್ಟಿ [೧೦] ಇಂಗಳಹಳ್ಳಿ [೧೧] ಕಿರೇಸೂರ [೧೨] ಹೆಬಸೂರ [೧೩] ಚಾಳಬ್ಬಿ [೧೪] ಕೊಂಕಣ ಕುರಹಟ್ಟಿ [೧೫] ಕೋಟ್ಟಗವಾಡ [೧೬] ಉಮಚಿಗಿ ಈ ೧೬ ಹಳ್ಳಿಗಳನ್ನು ಬಿಟ್ಟು ಹುಬ್ಬಳ್ಳಿ" ಎಂದು ಓದತಕ್ಕದ್ದು.

(ಕ) "ನವಲಗುಂದ"ಕ್ಕೆ ಬದಲು "(೧) ಅಹೆಟ್ಟಿ (೨) ಶಿರೂರ (೩) ಗುಮಗೋಳ (೪) ಮೊರಬ (೫) ಕಲಿಮೊರಬ (೬) ಬ್ಯಾಲಾಳ (೭) ಹನಸಿ (೮) ಜಾವೂರ (೯) ಶಿರ್ಕೋಳ (೧೦) ಬಳ್ಳೂರ (೧೧) ತಿಲಾರ್ಪೂರ (೧೨) ಹಾಳಕುಸುಗಲ್ಲ (೧೩) ಕೊಂಗವಾಡ (೧೪) ತಾಥಾಳ (೧೫) ಅಮರಗೋಳ (೧೬) ಕಾಡಧಳ್ಳಿ (೧೭) ಸೊಟಕನಹಾಳ (೧೮) ನಾಗನೂರ (೧೯) ಅಳಗವಾಡಿ (೨೦) ಗೊಬ್ಬರಗುಂಪಿ (೨೧) ಶಾನವಾಡ (೨೨) ಬೆಳಹಟಗಿ (೨೩) ಗುಡಿಸಾಗರ (೨೪) ಬೋಗನೂರ (೨೫) ನಾವಿಕನೂರ (೨೬) ಖನ್ನೂರ (೨೭) ಶಲವಡಿ (೨೮) ವಿನಾಯಕಪೇಟ (೨೯) ಪಡೆಸೂರ (೩೦) ಕಮಾರಕೊಪ್ಪ (೩೧) ಯಮನೂರ (೩೨) ನಾವಳ್ಳಿ (೩೩) ತುಪ್ಪದ ಕುರಹಟ್ಟಿ (೩೪) ಹಾಲ ಕುರಹಟ್ಟಿ (೩೫) ಚಿಲಕವಾಡ (೩೬) ಕಿತ್ತೂರ (೩೭) ಅದನೂರ (೩೮) ಕರ್ಲವಾಡ (೩೯) ಹಲ್ಕೇರಿ (೪೦) ಬೆಟ್ಟೂರ (೪೧) ಕಾಲವಾಡ (೪೨) ಸಾಸ್ವಿಹಳ್ಳಿ (೪೩) ನಾಗರಹಳ್ಳಿ (೪೪) ಬಲ್ಲರವಾಡ (೪೫) ಕೊಂಡಿಕೊಪ್ಪ (೪೬) ಅಣ್ಣಿಗೇರಿ (೪೭) ನವಲಗುಂದ (೪೮) ನಲವಡಿ ಈ ೪೮ ಹಳ್ಳಿಗಳನು ಹೊರತುಪಡಿಸಿ ನವಲಗುಂದ" ಎಂದು ಓದತಕ್ಕದ್ದು.

(ಡ) "ನರಗುಂದ ಪೇಠಾ"ವನ್ನು ತೆಗೆದುಹಾಕತಕ್ಕದ್ದು.

(ಈ) "ಮುಂಡರಗಿ ಪೇಠಾ"ದ ಬದಲು "(೧) ಚುಂಚಿಹಾಳ (೨) ಶಿರೂರ (೩) ಬರದೂರ (೪) ಹೈತಾಪೂರ (೫) ಮೇವುಂಡಿ (೬) ತಂಬರಗುಂಡಿ ಈ ಅರು ಹಳ್ಳಿಗಳನ್ನು ಹೊರತುಪಡಿಸಿ ಮುಂಡರಗಿ ಪೇಠಾ" ಎಂದು ಓದತಕ್ಕದ್ದು.

( ಫ ) " ರೋಣ " ಕ್ಕೆ ಬದಲಾಗಿ " ೧) ಗುಯಿಲಗಂಡಿ ೨) ಕರಕಿಕಟ್ಟಿ ೩) ಭೋಪಾಲಪುರ ೪) ಮೇಗೂರ ೫) ಕರಮಡಿ ೬) ಹಡಗಲಿ ಸಮ್ಮತ ಯಾವಗಲ್ಲ ೭) ಯಾವಗಲ್ಲ ೮) ಕವಜಗೇರಿ ೯) ಬೆಳವಣಕಿ ೧೦) ಮಲ್ಲಾಪುರ ೧೧) ಹೊಳೆಮಣ್ಣೂರ ೧೨) ಗಾಡಗೋಳಿ ೧೩) ಕುರವಿನಕೊಪ್ಪ ೧೪) ಅಲೂರ ೧೫) ಅಮರಗೋಳ ೧೬) ಹೊಳೆಹಡಗಲಿ ೧೭) ಹೇಲೇರಿ ಸಮ್ಮತ ಬೇಲೂರ ೧೮) ಬಸರಕೋಡ ೧೯) ನೈನಾಪುರ ೨೦) ಬೇಣಹಾಳ ೨೧) ಮಾದಲಗೇರಿ ೨೨) ಹುಲ್ಲೂರ ೨೩) ಮುಂದೇನಗುಡಿ ೨೪) ಅರಹುಣಸಿ ೨೫) ಹಿರೇಮಣ್ಣೂರ ೨೬) ಛಾಸಲಾಪುರ ೨೭) ಸಂದಿಗವಾಡ ೨೮) ಚಿಕ್ಕಮಣ್ಣೂರ ೨೯) ಸವದಿ ೩೦) ಹೊನ್ನಾಪುರ ೩೧) ಗುಜಮಾಗಡಿ ೩೨) ಕೂರಡಗಿ ೩೩) ನಾಗರಹಾಳ ೩೪) ಅಬ್ಬಿಗೇರಿ ೩೫) ಬೂದಿಹಾಳ ೩೬) ಮಾರನಬಸರಿ ೩೭) ಕೃಷ್ಣಾಪುರ ೩೮) ದ್ಯಾಮುನಶಿ ೩೯) ಕುರಹಟ್ಟಿ ಈ ೩೯ ಹಳ್ಳಿಗಳನ್ನು ಹೊರತುಪಡಿಸಿ ರೋಣ" ಎಂದು ಓದತಕ್ಕದ್ದು.

ಭಾರತ ಸಂರಕ್ಷಣ ಕಾಯಿದೆಯ ೧೧೯ ನೇ ನಿಯಮದ (೧) ನೇ ಉಪನಿಯಮದನ್ನನುಸರಿಸಿ, ಈ ಅಜ್ಞೆಯನ್ನು ಅಧಿಕೃತ ಗ್ಯಾಝೆಟದಲ್ಲಿ ಮತ್ತು ಕೆಳಗಿನ ಪತ್ರಿಕೆಗಳಲ್ಲಿ ಪ್ರಸಿದ್ಧಿಸಲಾಗುವದು—

೧. ಸಂಯುಕ್ತ-ಕರ್ನಾಟಕ, ಹುಬ್ಬಳ್ಳಿ.
೨. ಕರ್ನಾಟಕ ಬಂಧು, ಗದಗ.
೩. ಕರ್ಮವೀರ, ಹುಬ್ಬಳ್ಳಿ

ಮುಂಬಯಿ ಗವ್ಹರ್ನರರ ಅಜ್ಞೆಯ ಪ್ರಕಾರ
**ಡಬ್ಲ್ಯು. ಜೆ. ಹುಲಂಡ**
ಸರಕಾರದ ಜೊತೆ ಕಾರ್ಯದರ್ಶಿ



# ಜೀವನ ಮತ್ತು ವಿಜ್ಞಾನ

ವೆಂಕೋಬಾಚಾರ್ಯ ಉಪಾಧ್ಯಾಯ ಎಂ. ಎಸ್‌ಸಿ.

### ಹಿಂದುಸ್ತಾನದಲ್ಲಿ ವನಸ್ಪತಿ ತೈಲಗಳ ಉಪಯೋಗ

ವನಸ್ಪತಿ ತೈಲಗಳ ಉದ್ಯಮವು ಹಿಂದುಸ್ತಾನದಲ್ಲಿ ಮೊದಲಿನಿಂದಲೂ ನಡೆಯುತ್ತ ಬಂದಿದೆ ಕಳೆದ ನಾಲ್ವತ್ತು ವರ್ಷಗಳಿಂದ ವನಸ್ಪತಿ ತೈಲಗಳನ್ನು ಆಹಾರದಲ್ಲಿ ಅಲ್ಲದೆ ಮತ್ತೆ ಇತರ ಕೆಲಸಗಳಲ್ಲಿ ಉಪಯೋಗಿಸಬೇಕೆಂದು ಎಷ್ಟೋ ಪ್ರಯತ್ನಗಳು ನಡೆದವು. ಇದೇ ಮೇರೆಗೆ ವನಸ್ಪತಿ ಎಣ್ಣೆಗಳಿಂದ ಬಟ್ಟೆಗಳನ್ನು ಸ್ವಚ್ಛ ಮಾಡುವ ಸಾಬೂನು ಮತ್ತು ಮೈಗೆ ಹಚ್ಚಿಕೊಳ್ಳುವ ಸಾಬೂಣ ತಯಾರು ಮಾಡಲ್ಪಟ್ಟವು. ಇದಲ್ಲದೇ ಈ ಎಣ್ಣೆಗಳಿಂದ ಬಟ್ಟೆಗಳ ತಯಾರಿಯಲ್ಲಿ ಉಪಯೋಗವಾಗುವ 'ಟರ್ಕಿ ಕೆಂಪು ಎಣ್ಣೆ' (Turkey Red oil) ಯನ್ನು ತಯಾರಿಸಲಾಯಿತು.

೧೯೩೨ರಿಂದ ೧೯೩೭ರ ವರೆಗಿನ ಅವಧಿಯಲ್ಲಿ ಹಿಂದುಸ್ತಾನದಿಂದ ಪ್ರತಿವರ್ಷ ೧೨ ಕೋಟಿ ೫೦ ಲಕ್ಷ ರೂಪಾಯಿ ಬೆಲೆ ಬಾಳುವ ಎಣ್ಣೆಗಳು ಮತ್ತು ಒಂದು ಕೋಟಿ ೯೦ ಲಕ್ಷ ರೂಪಾಯಿ ಬೆಲೆ ಬಾಳುವ ಹಿಂಡಿ ಪರದೇಶಕ್ಕೆ ಕಳಿಸಲಾಯಿತು. ಇವುಗಳ ಬದಲಾಗಿ ಇವೇ ವನಸ್ಪತಿ ತೈಲಗಳಿಂದ ತಯಾರಾಗುವ ಹಾಗೂ ೩ ಕೋಟಿ ೮೦ ಲಕ್ಷ ರೂಪಾಯಿ ಬೆಲೆ ಬಾಳುವ ಬಣ್ಣ, ಸಾಬೂನು, ಸ್ಟೀರೀನ್ (Stearine), ಕೊಬ್ಬು, ಗ್ಲಿಸಿರೀನ್ ಮತ್ತು ವನಸ್ಪತಿ ತುಪ್ಪ ಮುಂತಾದವುಗಳನ್ನು ಪರದೇಶದಿಂದ ಬರಮಾಡಿಕೊಳ್ಳಲಾಯಿತು. ಇದೇ ಪ್ರಕಾರ ಪ್ರತಿ ವರ್ಷ ನಮ್ಮಲ್ಲಿಂದ ೧೨ ಕೋಟಿ ರೂಪಾಯಿ ಬೆಲೆಬಾಳುವ ಕಚ್ಚಾಸಾಮಾನುಗಳು ಪರದೇಶಕ್ಕೆ ಕಳಿಸಲ್ಪಡುತ್ತವೆ. ಒಂದು ವೇಳೆ ಉದ್ಯಮಗಳಲ್ಲಿ ಪ್ರವೀಣರಾದವರು ಇತ್ತ ಕಡೆಗೆ ಲಕ್ಷ ಕೊಟ್ಟರೆ, ಎಣ್ಣೆಯ ಬೀಜಗಳನ್ನು ಪರದೇಶಕ್ಕೆ ಕಳಿಸದೆ ಇಲ್ಲಿಯೇ ಅವುಗಳಿಂದ ಚೆನ್ನಾಗಿ ಲಾಭ ಪಡೆಯಬಹುದಾಗಿದೆ.

ವನಸ್ಪತಿ ತೈಲಗಳು ಕೆಳಗೆ ತಿಳಿಸಿದ ಉದ್ಯಮಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗವಾಗುತ್ತವೆ.

೧ ಸಾಬೂನು ಹಾಗೂ ಗ್ಲಿಸಿರೀನ್
೨ ಕೃತಕ ತುಪ್ಪ ಮತ್ತು ಬೆಣ್ಣೆ
೩ ವನಸ್ಪತಿ ಕೊಬ್ಬು
೪ ಬಣ್ಣ ಮತ್ತು ಮೆರುಗೆಣ್ಣೆ
೫ ಸ್ಟೀರೀನ್ ಮತ್ತು ಮೇಣಬತ್ತಿ
೬ ಸಂಯುಕ್ತ ತೈಲ ವಸ್ತುಗಳು

ನಮ್ಮಲ್ಲಿ ಸಾಬೂನು ತಯಾರಿಸುವ ಎಂಟು ಕಾರ್ಖಾನೆಗಳಿದ್ದರೆ ಕೂಡ, ನಮಗೆ ಒಂದು ವರ್ಷಕ್ಕೆ ಬೇಕಾಗುವಷ್ಟು ಸಾಬೂನುಗಳು ಇವುಗಳಿಂದ ತಯಾರಾಗುವದಿಲ್ಲ. ಇದೇ ಕಾರಣದಿಂದ ಪ್ರತಿವರ್ಷ ಒಂದು ಕೋಟಿ ರೂಪಾಯಿ ಬೆಲೆಬಾಳುವ ಸಾಬೂನುಗಳನ್ನು ಪರದೇಶದಿಂದ ಬರಮಾಡಿಕೊಳ್ಳಬೇಕಾಗುತ್ತದೆ. ಅದುದರಿಂದ ಸಾಬೂನ ತಯಾರಿಸುವ ಕಾರ್ಖಾನೆಗಳು ನಮ್ಮಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಬೇಕು.

ಸಾಬೂನು ತಯಾರು ಮಾಡುವ ಕಾರ್ಖಾನೆಗಳಲ್ಲಿ, ಸಾಬೂನು ತಯಾರಿಸುವಾಗ,ಅದರ ಜೊತೆಗೆ ಸಂಜನಿತ (By Product) ದಂತೆ ಗ್ಲಿಸಿರೀನ್ (Glycerine) ಎಂಬ ದ್ರವವು ಕೂಡ ತಯಾರಾಗುತ್ತದೆ. ಕೇವಲ ಲಿವ್ಹರ್ ಬ್ರದರ್ಸ್, ಟಾಟಾ ಅಯಿಲ್ ಮಿಲ್ಸ್ ಮತ್ತು ಸ್ವಸ್ತಿಕ್ ಅಯಿಲ್ ಮಿಲ್ಸ್‌ಗಳಲ್ಲಷ್ಟೇ, ಸಾಬೂನಿನ ಜೊತೆಗೆ ತಯಾರಾಗುವ ಗ್ಲಿಸಿರೀನ್‌ವನ್ನು ಬೇರ್ಪಡಿಸುತ್ತಾರೆ. ಯುದ್ಧದ ಮೂಲಕ ಗ್ಲಿಸಿರೀನದ ಬೆಲೆಯು ಕೂಡ ಹೆಚ್ಚಾಗಿದೆ. ಒಂದು ಕಡೆ ಇದರಿಂದ ನೈಟ್ರೊಗ್ಲಿಸಿರೀನ್ (Nitro-glycerine) ತಯಾರು ಮಾಡಿ ಯುದ್ಧಕಾಲದಲ್ಲಿ ಸಿಡಿಮದ್ದಿನಂತೆ ಉಪಯೋಗಿಸಿದರೆ, ಇನ್ನೊಂದು ಕಡೆ ಶಾಂತಿಕಾಲದಲ್ಲಿ ಇದನ್ನು ಔಷಧಗಳಲ್ಲಿಯೂ ಫಾರಮಸಿಗಳಲ್ಲಿಯೂ ಉಪಯೋಗಿಸಬಹುದಾಗಿದೆ. ಕಾರಣ ಪ್ರತಿಯೊಂದು ಕಾರ್ಖಾನೆಯವರು ಸಾಬೂನಿನ ಜೊತೆಗೆ ತಯಾರಾಗುವ ಗ್ಲಿಸಿರೀನ್‌ವನ್ನು ಬೇರ್ಪಡಿಸುವುದು ಅವಶ್ಯಕ.

ಹಿಂದುಸ್ತಾನದಲ್ಲಿ ಧನಕರುಗಳ ಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿದ್ದ ಮೂಲಕ ಬೆಣ್ಣೆ ತುಪ್ಪಗಳ ಕೊರತೆ ಪಾಶ್ಚಾತ್ಯದೇಶಗಳಲ್ಲಿದ್ದಂತೆ ನಮ್ಮ ದೇಶದಲ್ಲಿ ಇಲ್ಲ. ಇಷ್ಟಿದ್ದರೂ ಕೃತಕ ತುಪ್ಪವು ದಿನಮೇಲ ರೂಢಿಯೊಳಗೆ ಬರುತ್ತಾ ಇದೆ. ಇವತ್ತಿನವರೆಗೂ ಹಾಲೆಂಡ್‌ದಿಂದ ಸೇಂಗಾ ಕೊಬ್ಬರೆಣ್ಣೆಗಳಿಂದ ತಯಾರಾದ ಮತ್ತು ೫೦ ಲಕ್ಷ ರೂಪಾಯಿ ಬೆಲೆ ಬಾಳುವ ವನಸ್ಪತಿ ತುಪ್ಪವನ್ನು ಪ್ರತಿವರ್ಷ ನಮ್ಮ ದೇಶಕ್ಕೆ ಬರಮಾಡಿಕೊಳ್ಳಲಾಗುತ್ತಿತ್ತು. ಆದರೆ ಈಚೆಗೆ ಮುಂಬಯಿ ಮುಂತಾದ ದೊಡ್ಡ ಪಟ್ಟಣಗಳಲ್ಲಿ ಕೃತಕ ತುಪ್ಪ ತಯಾರಿಸುವ ಕಾರ್ಖಾನೆಗಳು ಹುಟ್ಟಿದಂದಿನಿಂದ ಪರದೇಶದಿಂದ ಕೃತಕ ತುಪ್ಪವು ಇಲ್ಲಿಗೆ ಬರುವದು ನಿಂತುಹೋಗಿದೆ. ಕೃತಕ ತುಪ್ಪವು ರುಚಿಯಲ್ಲಿ ಸ್ವಾಭಾವಿಕ ತುಪ್ಪದಂತೆಯೆ ಆಗಿದೆ. ಆದರೆ ಇದರಲ್ಲಿ ಜೀವಸತ್ವಗಳು ( Vitamins )] ಸ್ವಲ್ಪ ಕಡಿಮೆ ಒಂದು ವೇಳೆ ಇದರಲ್ಲಿ ಜೀವಸತ್ವಗಳನ್ನು ಸರಿಯಾದ ಪ್ರಮಾಣದಲ್ಲಿ ಸೇರಿಸಿದರೆ ಇದರ ಉಪಯೋಗವು ಕೂಡ ಅರೋಗ್ಯ ದೃಷ್ಟಿಯಿಂದ ಸ್ವಾಭಾವಿಕ ತುಪ್ಪದಷ್ಟೇ ಆಗುವದು.

ವನಸ್ಪತಿ ತೈಲಗಳಿಂದ ಕ್ಷೀರರಸವನ್ನುಂಟು ಮಾಡುವ ವಸ್ತುಗಳನ್ನು ತಯಾರಿಸಿ, ಇವುಗಳನ್ನು ಬಣ್ಣ ಎದ್ದುವದರಲ್ಲಿಯೂ ಬಣ್ಣ ಹೋಗಲಾಡಿಸುವದರಲ್ಲಿಯೂ ನೂಲಿನ ಬಟ್ಟೆಗಳಿಗೆ ಮಸಾಲಿ ಹಚ್ಚುವದರಲ್ಲಿಯೂ ಬಟ್ಟೆಗಳಲ್ಲಿ ನಿರುಸು ಉಂಟುಮಾಡುವದರಲ್ಲಿಯೂ ಉಪಯೋಗಿಸುತ್ತಾರೆ. ಸದ್ಯಕ್ಕೆ ಔಡಲ ಎಣ್ಣೆಯಿಂದ ಈ ತರಹದ ಒಂದು ವಸ್ತು 'ಟರ್ಕಿ ರೆಡ್ ಅಯಿಲ್' ( Turkey Red oil ) ನ್ನೂ ತಯಾರಿಸಿದ್ದಾರೆ. ಈ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿಗೆ ಸಂಶೋಧನೆಗಳು ಆಗಬೇಕಾಗಿವೆ.

ಇದಲ್ಲದೆ ಪ್ರತಿವರ್ಷ ಹಿಂದುಸ್ತಾನದಲ್ಲಿ ಸುಮಾರು ೩೦ ಲಕ್ಷರೂಪಾಯಿ ಬೆಲೆಬಾಳುವ ಪ್ರಾಣಿವರ್ಗದ ಕೊಬ್ಬನ್ನು ಪರದೇಶದಿಂದ ಬರಮಾಡಿಕೊಳ್ಳುತ್ತಾರೆ. ಇದು, ಬಟ್ಟೆಗಳ ತಯಾರಿಯಲ್ಲಿಯೂ ಚರ್ಮ ಮತ್ತು ಸಾಬೂನುಗಳ ಉದ್ಯಮಗಳಲ್ಲಿಯೂ ಉಪಯೋಗವಾಗುತ್ತದೆ. ಒಂದು ವೇಳೆ ವನಸ್ಪತಿ ತೈಲಗಳಿಂದ 'ಪ್ರಾಣಿವರ್ಗದ ಕೊಬ್ಬರಿಗಳ ಬದಲು ( Substitute ) ತಯಾರಿಸಿದರೆ ದೇಶದ್ದೊಂದು ದೊಡ್ಡ ಕೊರತೆಯನ್ನು ನೀಗಿಸಿದಂತಾಗುವುದು.

ಹಿಂದುಸ್ತಾನದಲ್ಲಿ ಸಸ್ಯಗಳಿಂದ ತಯಾರಿಸಿದ ರಾಳವನ್ನು ವನಸ್ಪತಿ ತೈಲದಲ್ಲಿ ಅಥವಾ ಮದ್ಯಸಾರದಲ್ಲಿ ಕರಗಿಸಿ, ವಾರ್ನಿಸೆಣ್ಣೆ ತಯಾರು ಮಾಡುವ ಒಟ್ಟು ಹತ್ತು ಕಾರ್ಖಾನೆಗಳಿವೆ. ಈ ಹತ್ತು ಕಾರ್ಖಾನೆಗಳಿಂದ ನಮ್ಮ ಕೊರತೆ ನೀಗುವಂತಿಲ್ಲ. ಕಾರಣ ಇನ್ನೂ ಹೆಚ್ಚು ಕಾರ್ಖಾನೆಗಳು ಅವಶ್ಯಕ.

ಖನಿಜದ ಮೇಣದಲ್ಲಿಯೂ ಮೀನದ ಮೇಣದಲ್ಲಿಯೂ ಶೇಕಡಾ ೩ರಿಂದ ೫ ಭಾಗದಷ್ಟು ಸ್ಟೀರಿಕ್ ಅಮ್ಲ ( Stearic Acid ) ವನ್ನು ಬೆರಸಿ, ಈ ರೀತಿಯಾಗಿ ತಯಾರಾದ ಮಿಶ್ರಣದಿಂದ ಮೇಣಬತ್ತಿಗಳನ್ನು ತಯಾರಿಸುವ ಕೆಲಸ ನಮ್ಮಲ್ಲಿ ನಡೆದಿದೆ. ಇವುಗಳ ತಯಾರಿಯ ಸಲುವಾಗಿ ಪ್ರತಿ ವರ್ಷವೂ ಸುಮಾರು ೧೦ ಲಕ್ಷ ರೂಪಾಯಿ ಬೆಲೆಬಾಳುವ ಸ್ಟೀರಿಕ್ ಅಮ್ಲವನ್ನು ಪರದೇಶದಿಂದ ಬರಮಾಡಿಕೊಳ್ಳಬೇಕಾಗುತ್ತಿದೆ. ನಾವು ಪ್ರಯತ್ನಪಟ್ಟಲ್ಲಿ ನಮ್ಮಲ್ಲಿಯೇ ತಯಾರಾಗುವ ವನಸ್ಪತಿ ತೈಲಗಳಿಂದ ಸ್ಟೀರಿಕ್ ಅಮ್ಲ ಮತ್ತು ಸ್ಟೀರೀನ್ ( Stearine ) ಗಳನ್ನು ತಯಾರಿಸಿ ನಮ್ಮ ದೇಶಕ್ಕಷ್ಟೇ ಒದಗಿಸಿಕೊಡುವದಲ್ಲದೇ ಪರದೇಶಕ್ಕೂ ಕಳಿಸಿಕೊಡಬಹುದಾಗಿದೆ.

ಎಣ್ಣೆಯ ಬೀಜಗಳಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿದ ಹಿಂಡಿಯು ಬಹಳ ಉಪಯೋಗವುಳ್ಳ ವಸ್ತುವಾಗಿದೆ. ಪ್ರತಿ ವರ್ಷ ಹಿಂದುಸ್ತಾನದಿಂದ ೨ ಕೋಟಿ ರೂಪಾಯಿ ಬೆಲೆಬಾಳುವ ಹಿಂಡಿಯು ಪರದೇಶಕ್ಕೆ ಕಳಿಸಲ್ಪಡುತ್ತದೆ. ಈ ಹಿಂಡಿಯನ್ನು ಗೊಬ್ಬರದಂತೆ ಉಪಯೋಗ ಮಾಡುವದಲ್ಲದೆ ಮನುಷ್ಯರ ಹಾಗೂ ಪ್ರಾಣಿಗಳ ಆಹಾರದಲ್ಲಿಯೂ ಉಪಯೋಗಿಸಬಹುದಾಗಿದೆ.

ಮೇಲೆ ವಿವರಿಸಿದ ಮಾತುಗಳಿಂದ ಹಿಂದುಸ್ತಾನದಲ್ಲಿ ವನಸ್ಪತಿ ತೈಲಗಳ ಉದ್ಯಮವು ಇನ್ನೂ ಸಾಕಷ್ಟು ಊರ್ಜಿತಾವಸ್ಥೆಯಲ್ಲಿ ಇಲ್ಲನೆಂಬಮಾತು ಸ್ಪಷ್ಟವಾಗಿದೆ. ಇದರಲ್ಲಿ ಇನ್ನೂ ಹೆಚ್ಚು ಹೆಳವಣಿಗೆ ಅಗಬೇಕಾದರೆ ನಮ್ಮಲ್ಲಿ ಭಾರಿ ರಸಾಯನಿಕ ( Heavy Chemicals ) ಗಳನ್ನು ಅಂದರೆ ಕ್ಷಾರ ಮತ್ತು ಅಮ್ಲ ( Alkali and Acid ) ಮುಂತಾದವುಗಳನ್ನು ಹೆಚ್ಚಿನ ಪ್ರಮಾಣದಲ್ಲಿ ತಯಾರಿಸುವ ಕಾರ್ಖಾನೆಗಳು ಬಹಳ ಅಗತ್ಯವೆಂದು ಬೇರೆ ಹೇಳಬೇಕಾಗಿಲ್ಲ.

### ಪೆಟ್ರೋಲದ ಒಂದು ಬದಲು

ಯುದ್ಧ ಕಾಲದಲ್ಲಿ ಪೆಟ್ರೋಲದ ಬಹಳ ಕೊರತೆ ಇದ್ದ ಮೂಲಕ 'ಸಬಲ ಮದ್ಯಸಾರ' ಕ್ಕೆ ಬಹಳ ಮಹತ್ವ ಕೊಡಲಾಗಿದೆ. ಇದನ್ನು ಪೆಟ್ರೋಲದಲ್ಲಿ ಬೆರಸಿ, ತಯಾರಾದ ಮಿಶ್ರಣವನ್ನು ಮೋಟರುಗಳಲ್ಲಿ ಉಪಯೋಗಿಸುವುದು ಕೆಲವು ವರ್ಷಗಳಿಂದ ನಡೆದುಬಂದಿದೆ. ಆದರೆ ಇತ್ತೀಚೆಗೆ ಪೆಟ್ರೋಲನ ಇನ್ನೊಂದು ಬದಲನ್ನು ಕಂಡುಹಿಡಿದಿದ್ದಾರೆ. ಇದು ಮೀಥೇನ್ ( Methane ) ಎಂಬ 'ಹೈಡ್ರೊ ಕಾರ್ಬನ್' ( Hydro carbon ) ದ ದ್ರವವಾಗಿದೆ. ಇದು ಅರೆಗಾವಾದ ಕಲ್ಲಿದ್ದಲ್ಲಿ ( Coke ) ಯನ್ನು ತಯಾರಿಸುವಾಗ ಸಂಜನಿತದಂತೆ ದೊರೆಯುತ್ತದೆ.

ಇದನ್ನು ಎಲ್ಲಕ್ಕೂ ಮೊದಲು 'ವಿಜ್ಞಾನ ಮತ್ತು ಶಿಲ್ಪಶಾಸ್ತ್ರ'ದ ಇಂಪೀರಿಯಲ್ ಕಾಲೇಜದವರು ೩೨ ಸೀಟುಗಳುಳ್ಳ ಮೋಟರಿನಲ್ಲಿ ಉಪಯೋಗಿಸಿ ಪರೀಕ್ಷಿಸಿದರು. ಪರೀಕ್ಷಿಸಿದ ನಂತರ ತಾವು ಕೈಕೊಂಡ ಎಲ್ಲ ಪ್ರಯೋಗಗಳನ್ನು ಹಾಗೂ ಸಿದ್ಧಾಂತಗಳನ್ನು 'ಲಂಕೆನ್‌ಷಾಯರ್'ದ ಒಂದು ಕಾರ್ಖಾನೆಯವರಿಗೆ ತಿಳಿಸಿದರು. ಇವತ್ತು ಸಾಳೆ ಇದೇ ಕಾರ್ಖಾನೆಯಲ್ಲಿ ಮೀಥೇನ ದ್ರವವನ್ನು ಹೆಚ್ಚಿನ ಪ್ರಮಾಣದಲ್ಲಿ ತಯಾರಿಸುವ ಕೆಲಸ ಭರದಿಂದ ಸಾಗಿದೆ.

# ಹಿಂಸಾಚಾರಕ್ಕೆ ಸರಕಾರನೇ ಹೊಣೆ

## ರಾಜದ್ರೋಹ ಆಪಾದನೆಗೆ ಶೇಖ ಅಬ್ದುಲ್ಲಾರ ಉತ್ತರ

### ಚಳವಳಿ ಪ್ರಾರಂಭವಾಗುವ ಮೊದಲೆ ದಬ್ಬಾಳಿಕೆಯ ಸಿದ್ಧತೆ!

"ನಮ್ಮ ಜೀವನಕ್ಕೆ ಅವಶ್ಯನಿದ್ದ ಕಾಯಿದೆ ಮಾಡುವ ಅಧಿಕಾರ ನಮ್ಮ ಜನ್ಮಸಿದ್ಧ ಹಕ್ಕು. ಕಾಶ್ಮೀರ ಮತ್ತು ಜಮ್ಮು ಪ್ರಜರ ಹಕ್ಕುಗಳ ವಿಷಯದಲ್ಲಿ ನಾನು ಇದು ವರೆಗೆ ಆಡಿದ ಅಥವಾ ಬರೆದ ಪ್ರತಿಯೊಂದು ಶಬ್ದಕ್ಕೂ ಅಂಟಿಕೊಳ್ಳುತ್ತೇನೆ" ಹೀಗೆಂದು ಕಾಶ್ಮೀರ ರಾಷ್ಟ್ರೀಯ ಪರಿಷತ್ತಿನ ಅಧ್ಯಕ್ಷ ಶೇಖ ಅಬ್ದುಲ್ಲಾ ಇವರು ತಮ್ಮ ಮೇಲೆ ನಡೆದ ರಾಜದ್ರೋಹದ ವಿಚಾರಣೆಯಲ್ಲಿ ಮೂರು ಸಾವಿರ ಶಬ್ದಗಳ ದೀರ್ಘ ಹೇಳಿಕೆಯನ್ನಿತ್ತು ತಮ್ಮ ಧೋರಣೆಯನ್ನು ಸಮರ್ಥಿಸಿಕೊಂಡರು.

"ನಾನು ರಾಜದ್ರೋಹದ ಅರೋಪ ಮಾಡಿಲ್ಲ. ನನ್ನ ಬಂಧನದ ನಂತರ ನಡೆಯಿತೆಂದು ಹೇಳಲಾಗುವ ಹಿಂಸೆ ನನ್ನ ಭಾಷಣಗಳ ಪರಿಣಾಮವಲ್ಲ. ನನ್ನ ಮೇಲೆ ಹೊರಿಸಿದ ರಾಜದ್ರೋಹದ ಅರೋಪ ಕೇವಲ ವ್ಯಕ್ತಿಗತವಾಗಿಲ್ಲ. ಇದರಿಂದ ಕಾಶ್ಮೀರದ ಪ್ರಜರನ್ನೇ ವಿಚಾರಣೆಗೆ ನಿಲ್ಲಿಸಿದಂತಾಗಿರುವದು.

"ಹಿಂದುಸ್ತಾನ ಮತ್ತು ಹಿಂದೀ ಸಂಸ್ಥಾನಗಳ ಭವಿತವ್ಯದ ಬಗ್ಗೆ ಬ್ರಿಟಿಶ ಮಂತ್ರಿಗಳು ವ್ಯಕ್ತಮಾಡಿದ ಅಭಿಪ್ರಾಯ ಸರ್ವವಿದಿತವಿದೆ. ಬ್ರಿಟಿಶ ಸರಕಾರದ ಜೊತೆಗೆ, ಅವರ ಆಳಿಕೆಯ ಪ್ರತೀಕಗಳಾದ ಹಳೆಯ ಸನದು, ಒಪ್ಪಂದ, ಕರಾರು ಮೊದಲಾದವು ಸಹ ಹೋಗತಕ್ಕದ್ದು. ಈಗಿನ ಬ್ರಿಟಿಶ ಹಿಂದುಸ್ತಾನ ಹಾಗೂ ಸಂಸ್ಥಾನಗಳ ನಡುವೆ ಹೊಸ ಒಪ್ಪಂದವಾಗಬೇಕಾಗುವದು. ಅಮೃತಸರ ಒಪ್ಪಂದದ ಹಣೆಬರಹ ರಾಜ್ಯಕ್ಕೆ ಹೊರ್ತಾಗಿಲ್ಲ. "ಕ್ವಿಟ್ ಕಾಶ್ಮೀರ" ಚಳವಳಿಯ ಪ್ರೇರಣೆಗೆ ಇದೇ ಕಾರಣ. ಭರತಖಂಡದಲ್ಲೆಲ್ಲ ಕುಸಿದುಬೀಳುತ್ತಿರುವ ಸಂಸ್ಥಾನ ಆಳಿಕೆ ಇಲ್ಲಿಯೂ ಬೇಡೆಂಬ ಕೂಗಿಗೆ ಅದು ಬೆಂಬಲ ಕೊಟ್ಟಿತು. ಇದರಲ್ಲಿ ನನ್ನ ವೈಯಕ್ತಿಕ ವಿಷಯವೇನೂ ಇಲ್ಲ.

### ದಬ್ಬಾಳಿಕೆಯೇ ಮೂಲ ಕಾರಣ

"ಕಳೆದೆರಡು ತಿಂಗಳಲ್ಲಿ ಸಂಭವಿಸಿದ ಘಟನೆಗಳು ಸರಕಾರದ ಉಗ್ರದಬ್ಬಾಳಿಕೆಯ ಪರಿಣಾಮವಲ್ಲದೆ ನನ್ನ ಭಾಷಣಗಳಲ್ಲ. ಕಾಶ್ಮೀರದ ಪರಿಸ್ಥಿತಿ ಈಗ ಗಂಭೀರವಾಗಿದೆ. ಕಾಶ್ಮೀರದ ಮುಖ್ಯ ಮಂತ್ರಿಗಳು ಹನ್ನೊಂದು ತಿಂಗಳ ವರೆಗೆ ನಡೆಸಿದ ಕ್ರೂರ ದಬ್ಬಾಳಿಕೆಯ ಫಲವಿದು. ಈಗಿನ ಮುಖ್ಯ ಮಂತ್ರಿಗಳು ಅಧಿಕಾರಕ್ಕೆ ಬಂದಕೂಡಲೆ ಜನರನ್ನು ದೂರವಿರಿಸುವ ಧೋರಣೆ ತಾಳಲಾಯಿತು. ರಾಷ್ಟ್ರೀಯ ಪರಿಷತ್ತಿನ ಚಳವಳಿಯನ್ನು ಮುರಿಯುವದೇ ಅದರ ಗುರಿಯಾಗಿತ್ತು.

"ಅಧಿಕಾರಿಗಳು ಹನ್ನೊಂದು ತಿಂಗಳಿಂದ ಸಿದ್ಧತೆ ಮಾಡಿದ್ದಾರೆ. ಇನ್ನು ಜನರ ಚಳವಳಿಗೆ ಹೆದರಿ ಡೊಗ್ಗಾ ಊರುವದಿಲ್ಲ. ಮತ್ತು ಅದನ್ನು ಸೆದೆಬಡೆಯಲು ಹಿಂದೆ ಮುಂದೆ ನೋಡುವದಿಲ್ಲ," ಎಂದು ಕಾಶ್ಮೀರದ ಮುಖ್ಯ ಮಂತ್ರಿಗಳು ಮೇ ತಿಂಗಳ ೨೦ ನೇ ದಿನ ಆಡಿದ ಮಾತುಗಳು ಸ್ವಯಂ ಪುರಾವೆಗಳಾಗಿರುವವು. "ಕ್ವಿಟ್ ಕಾಶ್ಮೀರ" ಚಳವಳಿ ಪ್ರಾರಂಭವಾಗುವ ಹನ್ನೊಂದು ತಿಂಗಳ ಮೊದಲಿನಿಂದ ಸರಕಾರದವರು ಸಿದ್ಧತೆ ಮಾಡಿದ್ದಾರೆಂದು ಮುಖ್ಯಮಂತ್ರಿಗಳು ಒಪ್ಪಿಕೊಂಡಿರುವರು. ನನ್ನ ಭಾಷಣಗಳು ಈಗಿನ ಪರಿಸ್ಥಿತಿಗೆ ಕಾರಣವೆಂದು ಅರೋಪಿಸಲಾಗುತ್ತದೆ. ಆದರೆ ನಾನು ಭಾಷಣ ಪ್ರಚಾರ ಪ್ರಾರಂಭಿಸುವ ಮೊದಲೇ ಸೈನ್ಯದ ವ್ಯವಸ್ಥೆ ಮಾಡಲಾಗಿತ್ತು. ಮೂರು ದಲಗಳನ್ನು ವಿಮಾನದಲ್ಲಿ ಕರೆಸಲಾಗಿದೆ. ಸರಕಾರದ ಈ ಸಿದ್ಧತೆ ಮತ್ತು ಅನಂತರ ಕೈಕೊಂಡ ನಿರ್ದಯ ದಬ್ಬಾಳಿಕೆ ಇಂದಿನ ಗಂಭೀರ ಪರಿಸ್ಥಿತಿಗೆ ಮುಖ್ಯ ಕಾರಣ. ಮೇ ೨೦ರ ನಂತರ ಭಾಷಣಗಳಾದುದು ಬಹಳ ಕಡಿಮೆ. ಭಾಷಣಗಳ ಗುಣಾವಗುಣಗಳ ಚರ್ಚೆಯ ಭರದಲ್ಲಿ ಸರಕಾರದ ನಿಷ್ಕರುಣ ಆಡಳಿತವನ್ನು ಮರೆಯಲಾಗದು. ಇಂಥ ಆಳಿಕೆಯ ಮೂಲಕ ಸ್ತ್ರೀಪುರುಷರನ್ನು ಅಪಮಾನಗೊಳಿಸಿದರು; ಬೀದಿಗಳಲ್ಲಿ ಜನರು ಹೊಟ್ಟೆಹೊಸೆದು ಅಥವಾ ಒಂದೇ ಕಾಲಿನಿಂದ ಕುಂಟುತ್ತ ಹೋಗಬೇಕಾಯಿತು. ಜನರ ತಲೆಯ ಮೇಲಿನ ರುಮಾಲದಿಂದ ರಸ್ತೆಯ ಕಸ ಗೂಡಿಸಲಾಯಿತು. ಮಸೀದೆ ಮತ್ತು ದೇವಾಲಯಗಳನ್ನು ಅಪವಿತ್ರಗೊಳಿಸಲಾಯಿತು. ಇದೇ ಜನತೆಯನ್ನು ಹೆದರಿಸುವದೇ ಅವರ ಈ ತರದ ಆಳಿಕೆಯ ಉದ್ದೇಶ.

"ನನ್ನ ಬಂಧನದ ನಂತರ ಸಂಭವಿಸಿದ ಘಟನೆಗಳಿಗೂ ನನ್ನ ಭಾಷಣಗಳಿಗೂ ಸಂಬಂಧ ಕಲ್ಪಿಸಲಾಗಿದೆ. ನನ್ನನ್ನೂ ನನ್ನ ನೂರು ಜನ ಸಹಕಾರಿಗಳನ್ನೂ ಕೂಡಲೇ ಬಂಧಿಸಿ ಜನರ ಮೇಲೆ ಸೈನ್ಯವನ್ನು ಹರಿಬಿಟ್ಟು ತಮ್ಮ ತಪ್ಪನ್ನು ಮುಚ್ಚಿಕೊಳುವದಕ್ಕೆ ನನ್ನ ಮೇಲೆ ಈ ಆರೋಪ ಹೊರಿಸಲಾಗಿದೆ; ನಮ್ಮ ಬೇಡಿಕೆಗಳು ಕೇವಲ ನಮ್ಮವಷ್ಟೇ ಅಲ್ಲ. ಅವು ಹಿಂದೀ ಸಂಸ್ಥಾನಗಳ ೯೩೦ ಲಕ್ಷ ಪ್ರಜರ ಬೇಡಿಕೆಗಳು. ಇದರಲ್ಲಿ ಜನಾಂಗ ಅಥವಾ ಜಾತಿಯ ಪ್ರಶ್ನೆಯಿಲ್ಲ.

"ಕ್ವಿಟ್ ಕಾಶ್ಮೀರ" ಮತ್ತು "ಅಮೃತಸರ ಒಪ್ಪಂದ! ತೊಡೆದು ಹಾಕಿರಿ" ಚಳವಳಿಯಲ್ಲಿ ಜಾತೀಯತೆಯ ಅಥವಾ ಕಮ್ಯೂನಿಸ್ಟರ ಅಂಗವಿಲ್ಲ. ಮತ್ತು ಅವರಿಂದ ಪ್ರೇರಿತವಾದುದೂ ಅಲ್ಲ. ಕಾಶ್ಮೀರ ರಾಷ್ಟ್ರೀಯ ಪರಿಷತ್ತು ಅಖಿಲ ಭಾರತ ಸಂಸ್ಥಾನ ಪ್ರಜಾಪರಿಷತ್ತಿನ ಅಂಗಸಂಸ್ಥೆಯಾಗಿದ್ದು ಹಿಂದೀ ಸ್ವಾತಂತ್ರ್ಯ ಹಾಗು ಸಾಮಾಜಿಕ ಮತ್ತು ಅರ್ಥಿಕ ಬದಲಾವಣೆ ಇವು ಅದರ ಗುರಿ.

"ಕಾಶ್ಮೀರದಲ್ಲಿ ನಿಸರ್ಗ ಸಂಪತ್ತಿಗೆ ಕೊರತೆ ಇಲ್ಲ. ಈ ಸಂಪತ್ತು ಒಂದೆಡೆ, ಇನ್ನೊಂದೆಡೆ ಜನತೆಯ ಕಡುಬಡತನ. ಹೀಗಾಗಿ ಜನರ ಮುಖ ಕಳೆಗುಂದಿ ನಿರ್ಜೀವವಾಗಿದೆ. ಈ ವಿಲಕ್ಷಣ ದೃಶ್ಯವನ್ನು ನೋಡಿದಾಕ್ಷಣ ಹೃದಯದಲ್ಲಿ ಕಲಮಲವೆದ್ದು, ಈ ದುರಂತ ಚಿತ್ರವನ್ನು ಸಂಪೂರ್ಣ ನಾಶಮಾಡಿ, ನಿಸರ್ಗದೇವಿಯ ವರವಿಗೆ ತಕ್ಕಂತೆ ಕಾಶ್ಮೀರದ ಪುನರ್ರಚನೆ ಕೈಕೊಳ್ಳಬೇಕೆಂಬ ಇಚ್ಛೆಯುಂಟಾಗುವದು."




ಜ್ಯೋತಿಷಿ:-ಕೃಷ್ಣಶಾಸ್ತ್ರಿ ಘಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜಾರ ಬೆಳಗಾವಿ

# ಅಗಸ್ಟ ತಾ. ೧೨ ರಿಂದ ೧೮ ರ ವರೆಗೆ

## ಮೇಷ

ನಿಮ್ಮ ಮತ್ತು ನಿಮ್ಮ ಹೆಂಡತಿಯ ಪ್ರಕೃತಿಯಲ್ಲಿ ಕುರಕುರಿ ಒಂದೇಸವನೆ ಇರುವದು. ಆದರೆ ಮನೆಯಲ್ಲಿಯ ಕೆಲ ಜನರಿಗೆ ಕಾಯಿಲೆ ಮತ್ತು ಕೆಲವರಿಂದ ಮನೆಯಲ್ಲಿಯ ಸಾಮಾನಗಳು ಅಪಗಿಸಲ್ಪಡುವವು. ಇಲ್ಲವೆ ಕಾಣವಾಗುವವು. ಇಂಥ ಗೊಂದಲದ ಕಡೆಗೆ ದುರ್ಲಕ್ಷ ಮಾಡಲೆಬೇಕಾಗುವದು. ಮಕ್ಕಳಿಗೆ ಪ್ರಿಯ ಆದರೆ ಸ್ವತಃಕ್ಕೆ ಅಪ್ರಿಯರಾದ ಒಬ್ಬಿಬ್ಬರು ಅತಿಥಿಗಳು ತಳ ವೂರುವರು. ಉದ್ಯೋಗದಲ್ಲಿ ಪ್ರಗತಿ ಕಡಮೆ ಲಾಭ ಅಸ್ಪಷ್ಟ. ಆದರೆ ಪ್ರತಿಷ್ಠೆ ಬಹಳ ಕಡಮೆಯಾಗುವದು ಸ್ಥಾವರದಲ್ಲಿಯು, ಮಾಂದ್ಯದಿಂದ ಮತ್ತು ಶತ್ರುಗಳ ಅತಿಕ್ರಮಣದಿಂದ ಹಾನಿ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅಪೇಕ್ಷಿ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಸ್ವಲ್ಪ ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ೧ನೇ ಚರಣಕ್ಕೆ ವಿಲಕ್ಷಣ ತೊಂದರೆ. ತಾ. ೧೩, ೧೪, ೧೫ ಅನುಕೂಲ.

## ವೃಷಭ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ ಆದರೆ ತವರೂರವರ ತಪ್ಪನ್ನು ಸಮರ್ಥಿಸಿಕೊಳ್ಳುವದರಿಂದ ಹೆಂಡತಿಗೂಡ ವಿಶೇಷ ವಾಗ್ಯುದ್ಧ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭವೂ ಉತ್ತಮ. ಆದರೆ ಲೋಕಮತವನ್ನು ನೋಯಿಸುವಂಥ ಕೆಲ ಸಂಗತಿಗಳನ್ನು ಮಾಡುವದರಿಂದ ಪ್ರತಿಷ್ಠೆ ಬಹಳ ಮಟ್ಟಿಗೆ ಕುಗ್ಗುವದು. ಮಿತ್ರಸುಖ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅರ್ಧಮರ್ಧ ಯಶಸ್ಸು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ ರೋಹಿಣಿಯ ಕೊನೆಯ ೩ ಮತ್ತು ಮೃಗಾದ ೧ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨,೧೬, ೧೭ ಅನುಕೂಲ.

## ಮಿಥುನ

ಪ್ರಕೃತಿಗೆ ಕಿರುಕಳ ಕಾಯಿಲೆ. ಸ್ತ್ರೀಸುಖದಲ್ಲಿ ವಿರಸವಾಗುವಂತೆ ಉಭಯತರಲ್ಲಿ ವಿರೋಧ. ಅಪ್ರಿಯ ಅತಿಥಿಗಳ ಮರ್ಜಿ ಹಿಡಿವ ಪ್ರಸಂಗ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ತುಂಬ ಆದರೆ ಅದು ಸಾಧ್ಯವಾಗುವ ವರೆಗೆ ಬಹಳ ತೊಂದರೆ. ಮಿತ್ರತ್ವದಲ್ಲಿ ವಿರೋಧ. ಸ್ಥಾವರದಲ್ಲಿ ಬಹಳ ಹೆಚ್ಚಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಯಶಸ್ಸು ಆದರೆ ಶತ್ರುಗಳು ಅದನ್ನು ಪಚನ ಮಾಡಗೊಡದಂತೆ ಪೇಚು ಹಾಕುವ ಪ್ರಯತ್ನ ಜೋರಿನಿಂದ ಮಾಡುವರು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಸ್ವಲ್ಪ ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ೧ನೇ ಚರಣಕ್ಕೆ ಬಹಳ ತೊಂದರೆ. ತಾ. ೧೬, ೧೭, ೧೮ ಅನುಕೂಲ.

## ಕರ್ಕ

ಪ್ರಕೃತಿ ಮತ್ತು ಸ್ತ್ರೀಸುಖ ಅನುಕೂಲ. ಆದರೆ ಮಕ್ಕಳಲ್ಲಿ ಒಬ್ಬರು ದೂರ ಹೋಗುವದರಿಂದವಿರಹದಿಂದ ಮನಸ್ಸು ವ್ಯಾಕುಲ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಅಲ್ಪ ಸ್ವಲ್ಪ ದಗದಗಿಯಿಂದಲೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಉತ್ತಮ. ಆದರೆ ಅವಾಸ್ತವಖರ್ಚಿನ ಕೆಲ ಪ್ರಸಂಗ ಮಿತ್ರಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷಾದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨,೧೬, ೧೭ ಅನುಕೂಲ.

## ಸಿಂಹ

ಸ್ವತಃಕ್ಕೆ ಮತ್ತು ಹೆಂಡತಿಗೆ ಬಹಳ ಶರೀರ ಕ್ಲೇಶ. ಅಲ್ಲದೆ ಪ್ರಪಂಚದಲ್ಲಿಯ ಬಹುಶಃ ಎಲ್ಲ ವಿಷಯಗಳಲ್ಲಿ ಬಹಳ ತೊಂದರೆ. ಆದರಲ್ಲಿಯೂ ಕೆಲಸ್ನೇಹಿತರು ಕುಟುಂಬದ ಹಿತದ ಸಂಗತಿಗಳು ಅಕಸ್ಮಾತ್ ಸಂಭವಿಸುವ ಯೋಗ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಅನುಕೂಲ ಆದರೆ ಲಾಭದ ಯಂತ್ರ ಸೂತ್ರ ಕೆಟ್ಟದ್ದೇ. ವಿಪರೀತ ವೆಚ್ಚ. ಸಾಲಗಾರರ ತೊಂದರೆ ವಿಪರೀತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು ಮತ್ತು ಶತ್ರುಗಳು ಮರ್ಯಾದೆ ತೆಗೆದುಕೊಳ್ಳುವ ಹೊಂಚು ಹಾಕುವರು. ಮಹತ್ವದ ಪತ್ರಗಳು ಇಲ್ಲವೆ ಲೇಖಗಳು ಕಳೆದು ಹೋಗುವ ಅಂಜಿಕೆ. ಮಿತ್ರರಲ್ಲಿಯೆ ನಿಂದೆ. ಪ್ರವಾಸ ಮತ್ತು ಭೆಟ್ಟಿ ಪತ್ರವ್ಯವಹಾರಕ್ಕಿಂತ ಅನುಕೂಲ. ಮಘಾದ ಕೊನೆಯ ೩ ಮತ್ತು ಪೂರ್ವಾದ ೧ನೇ ಚರಣಗಳಿಗೆ ತೊಂದರೆ ಹೆಚ್ಚು. ತಾ. ೧೪, ೧೫, ೧೮, ಅನುಕೂಲ.

## ಕನ್ಯಾ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣ ತೊಂದರೆಯಿಂದಲೆ. ಉದ್ಯೋಗದಲ್ಲಿ ಸಾಹಸದಂತೆ ಯಶಸ್ಸು ಸಿಕ್ಕು ಪ್ರತಿಷ್ಠೆ ಮತ್ತು ಲಾಭ ಉತ್ತಮ ಆದರೆ ಮಕ್ಕಳ ಮನಸ್ಸು ನೋಯಿಸುವ ಕೆಲ ಕೃತ್ಯಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಹಸ್ತಾದ ಕೊನೆಯ ೩ ಮತ್ತು ಚಿತ್ರಾದ ೧ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨, ೧೬, ೧೭ ಅನುಕೂಲ.

## ತುಲಾ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿಯ ಸ್ವಾಸ್ಥ್ಯ ಅಸ್ಪಷ್ಟ. ಉಳಿದ ವಿಷಯಗಳಲ್ಲಿಯೂ ಪ್ರಾಪಂಚಿಕ ಸುಖ ಬಹಳ ಕಡಮೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಲೋಕದೃಷ್ಟಿಯಿಂದ ಅನುಕೂಲ: ಆದರೆ ವಾಸ್ತವವಾಗಿ ಬಹಳ ಅನನುಕೂಲ ಮಿತ್ರತ್ವದಲ್ಲಿ ವಿರೋಧ. ಉದ್ದೇಶದಂತೆ ಒಂದೂ ಕೆಲಸವಾಗದಂತಹ ಕೆಲಸದಲ್ಲಿ ಹಣ ವೆಚ್ಚ ಮಾಡುವ ಪ್ರಸಂಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಡುವದು. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಸ್ವಾತಿಯ ಕೊನೆಯ ೩ ವಿಶಾಖಾದ ೧ ನೇ ಚರಣಕ್ಕೆ ಹೆಚ್ಚು ತೊಂದರೆ. ತಾ. ೧೪, ೧೫, ೧೮ ಸ್ವಲ್ಪ ಅನುಕೂಲ.

## ವೃಶ್ಚಿಕ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಅನುಕೂಲವಿದ್ದರೂ ಹೆಂಡತಿಗೂಡ ಅಲ್ಪಸ್ವಲ್ಪ ವಿರೋಧ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮ. ಪ್ರತಿಯೊಂದು ಕೆಲಸದಲ್ಲಿ ಅಲ್ಪಾಯಾಸದಿಂದ ಯಶಸ್ಸು. ಮಿತ್ರಸುಖ ಉತ್ತಮ. ದೊಡ್ಡವರಲ್ಲಿ ನಿಮ್ಮ ಗೌರವ ಆದುದನ್ನು ನೋಡಿ ಹಿತಶತ್ರುಗಳು ಅದೇ ಕಾಲಕ್ಕೆ ಕುಚೇಷ್ಟೆ ಮಾಡುವ ಅಂಜಿಕೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸನ್ಮಾನ್ಯ ಒಗಂಬಡಿಕೆಯಾಗುವ ಸಂಭವ. ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨, ೧೬, ೧೭ ಅನುಕೂಲ.

## ಧನು

ಪ್ರಕೃತಿ ಉತ್ತಮ. ಸ್ತ್ರೀ ಸುಖ ಅನುಕೂಲ. ಆದರೆ ಅವಳ ತವರ ಮನೆಯವರ ಜನರಗೂಡ ವಿರೋಧ ಬರುವ ಪ್ರಸಂಗ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಮಕ್ಕಳಲ್ಲಿ ಕೆಲ ಉನ್ನತಿಯ ಕೆಲಸಗಳು. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಉತ್ತಮವಿದೆ ಆದರೆ ಆಯಾ ಸಂಗತಿಗಳು ಪೂರ್ಣವಾಗುವ ವರೆಗೆ ಬಹಳ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಪ್ರವಾಸ ಮತ್ತು ಪತ್ರವ್ಯವಹಾರಕ್ಕಿಂತ ಭೆಟ್ಟಿ ಅನುಕೂಲ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ೧ ನೇ ಚರಣಕ್ಕೆ ಬಹಳ ತೊಂದರೆ, ತಾ. ೧೨, ೧೩, ೧೮, ಅನುಕೂಲ.

## ಮಕರ

ಪ್ರಕೃತಿ ಅನುಕೂಲ. ಸ್ತ್ರೀ ಸುಖ ಉತ್ತಮ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ಬಹಳ. ಮಕ್ಕಳಲ್ಲಿ ಉನ್ನತಿ ಆದರೆ ನಿಮ್ಮಗೂಡ ಅವರ ವರ್ತನೆ ತಿರಸ್ಕಾರದ್ದು. ಸ್ಥಾವರದಲ್ಲಿ ಸ್ವಲ್ಪ ಹಾನಿ ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಯಶಸ್ಸು. ಮಿತ್ರಸುಖ ಉತ್ತಮ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಅನುಕೂಲ. ಶ್ರವಣಾದ ಕೊನೆಯ ೩ ಮತ್ತು ಧನಿಷ್ಠಾದ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨, ೧೬, ೧೭ ಅನುಕೂಲ.

## ಕುಂಭ

ಪ್ರಕೃತಿ ನಿಮ್ಮದು ಮತ್ತು ಹೆಂಡತಿಯದು ಬಹಳ ಕೆಡುವದು. ಪ್ರಾಪಂಚಿಕ ಸುಖ ಬಹಳ ಉತ್ತಮ. ನೆರೆಯವರಿಂದ ಮಾತ್ರ ಬಹಳ ಉಪಸರ್ಗ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಕಡಮೆ. ಆದರೆ ಲಾಭ ಅನುಕೂಲ. ಮಿತ್ರರಲ್ಲಿ ಕ್ಲೇಶ. ಪ್ರವಾಸ ತೊಂದರೆಯದು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಅನುಕೂಲತೆ. ಭೆಟ್ಟಿ ಮತ್ತು ಪತ್ರವ್ಯವಹಾರ ಸಹಿತ ಮನೋಭಂಗ ಮಾಡುವಂಥವು. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾಭಾದ್ರಪದದ ೧ ನೇ ಚರಣಕ್ಕೆ ತೊಂದರೆ ಹೆಚ್ಚು. ತಾ. ೧೪, ೧೫, ೧೬ ಅನುಕೂಲ.

## ಮೀನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಬಹಳ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಯಶಸ್ಸು ಮತ್ತು ಲಾಭ ಬಹಳ. ಅನೇಕ ಪ್ರಕಾರದಿಂದ ಮನಸಿನ ಉತ್ಸಾಹ ಬೆಳೆವಂಥ ಸಂಗತಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಮಿತ್ರರಲ್ಲಿ ಕ್ಲೇಶ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾಭಾದ್ರಪದದ ಕೊನೆಯ ೩ ಮತ್ತು ರೇವತಿಯ ೧ ನೇ ಚರಣಕ್ಕೆ ತೊಂದರೆಯಿಂದಲೆ ಯಶಸ್ಸು. ತಾ. ೧೨, ೧೬, ೧೭, ೧೮ ಅನುಕೂಲ.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿತ ಪ್ರಕಟವಾಯಿತು